# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಕರ್ನಾಟಕ ರಾಜ್ಯ ೨೭ನೇ ಕಬ್ ಮತ್ತು ಬುಲ್ ಬುಲ್ ಉತ್ಸವ

೩.೧೧.೨೦೦೩ - ೭-೧೧-೨೦೦೩ ಚಿಕ್ಕಮಗಳೂರು ಜಿಲ್ಲೆ





# ನಿರಂತರ

ತಿಳಿ - ಬೆಳಿ - ಸವಿ



# ನಿರಂತರ

## ತಿಳಿ-ಬೆಳಿ-ಸವಿ




## ನೆನಪಿನ ಸಂಚಿಕೆ

ಕರ್ನಾಟಕ ರಾಜ್ಯ 27ನೆಯ
ಕಬ್ ಮತ್ತು ಬುಲ್ ಬುಲ್ ಉತ್ಸವ
3-11-2003 ರಿಂದ 7-11-2003



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ನೇತಾಜಿ ಸುಭಾಶ್ ಚಂದ್ರಬೋಸ್ ಜಿಲ್ಲಾ ಆಟದ ಮೈದಾನ
ಸ್ಕೌಟ್ ಮತ್ತು ಗೈಡ್ಸ್ ಕಛೇರಿ, ಚಿಕ್ಕಮಗಳೂರು - 577 101
ದೂರವಾಣಿ : 238374

**NIRANTARA** - *(Tili-Beli-Savi) Souvenir Brought out on the occasion of the 27th Cub and Bul Bul Utsav. held from 3rd to 7th November, 2003 at Netaji Subash Chandra Bose District Play Ground, Chikmagalur.*

*Published by : Bharath Scouts & Guides Karnataka State*

*Published - 2003*

***Host :*** ***Bharath Scouts & Guides***
*Chikmagalur District Association*
Ph : 08262-238374



Chief Editor :
***Sa. Girija Shankara***

Cover Page Art :
***Prakash Chowdhary***

Printed at :
***Gayathri Graphics,***
Gopal Krishna Temple Street,
Basavanahalli, Chikmagalur - 577 101
Ph : (08262) 230840, 233203

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**
**ಚಿಕ್ಕಮಗಳೂರು ಜಿಲ್ಲಾ ಸಂಸ್ಥೆ**

**ಕರ್ನಾಟಕ ರಾಜ್ಯ 27ನೆಯ ಕಬ್ ಮತ್ತು ಬುಲ್ ಬುಲ್ ಉತ್ಸವ**
**3 ರಿಂದ 7ನೆಯ ನವೆಂಬರ್ 2003**

# ನಿರಂತರ

**ತಿಳಿ-ಬೆಳಿ-ಸವಿ**

**ಸಂಪಾದಕ ಮಂಡಳಿ**

**ಅಧ್ಯಕ್ಷರು :**
*ಸಿ. ಸುರೇಶ್*
ಅಧ್ಯಕ್ಷರು, ಜಿಲ್ಲಾ ಪರ್ತಕರ್ತರ ಸಂಘ,
ಚಿಕ್ಕಮಗಳೂರು

**ಪ್ರಧಾನ ಸಂಪಾದಕರು :**
*ಸ. ಗಿರಿಜಾಶಂಕರ*

**ಸಂಪಾದಕರು :**
*ಪ್ರೊ. ಕೆ. ಓಂಕಾರಪ್ಪ ಮತ್ತು ಬೆಳವಾಡಿ ಮಂಜುನಾಥ*

**ಸಂಯೋಜಕರು :**
*ನೀಲಕಂಠಾಚಾರಿ*

---

ಸ್ಕೌಟ್ ಮತ್ತು ಗೈಡ್ಸ್ ಮೂಲತಃ ವ್ಯಕ್ತಿತ್ವ ಹಾಗೂ ಚಾರಿತ್ರ್ಯ ಬೆಳೆಸುವ ಒಂದು ವಿಶಿಷ್ಟ ಚಳವಳಿ

# ಪರಿವಿಡಿ

## ಉತ್ಸವದ ಧ್ಯೇಯ
# ನಿರಂತರ ತಿಳಿ-ಬೆಳಿ-ಸವಿ

ಎಂ. ಎನ್. ಷಡಕ್ಷರಿ

ಮಾನವನ ಜೀವನ ಒಂದು ನದಿಯಂತೆ, ಚೈತನ್ಯದಿಂದ ಕೂಡಿ ಸಣ್ಣ ಸಣ್ಣ ಝರಿಗಳನ್ನು ತನ್ನ ಒಡಲಿಗೆ ಸೇರಿಸಿಕೊಳ್ಳುತ್ತಾ ಒಂದು ಬೃಹತ್ ಜೀವನದಿಯಾಗಿ ತನ್ನ ಹಾದಿಯಲ್ಲಿ ಸಂಸ್ಕೃತಿಗಳನ್ನು ಬೆಳೆಸುತ್ತಾ ಮುಂದೆ ನಡೆಯುತ್ತದೆ.

ಪ್ರತಿಯೊಬ್ಬರ ಬದುಕು ಈ ಜೀವನದಿಯಂತೆ ಸದಾ ಹೊಸದನ್ನು ಮೈಗೂಡಿಸಿ ಕೊಳ್ಳುತ್ತಾ ಬೆಳೆಯುತ್ತಾ, ಬೆಳೆಸುತ್ತಾ ಸಾರ್ಥಕತೆಯನ್ನು ಪಡೆಯ ಬೇಕು. ಇದು ಒಂದು ನಿರಂತರ ಕ್ರಿಯೆಯಾಗ ಬೇಕು. ಏಕೆಂದರೆ ಬೆಳವಣಿಗೆ ಪ್ರತಿಯೊಂದು ಸಜೀವ ವಸ್ತುವಿನ ಕುರುಹು.

ನಾವು ಸಾಗುವ ಹಾದಿಯಲ್ಲಿ ಬಹಳಷ್ಟು ತಿಳಿಯುತ್ತಾ ಹೋಗುವುದು ಅನಿವಾರ್ಯ. ವ್ಯಕ್ತಿಗಳನ್ನು, ಸಮಸ್ಯೆಗೆ ಪರಿಹಾರಗಳನ್ನು ಮತ್ತು ಪ್ರಕೃತಿಯ ವೈವಿಧ್ಯದ ಸೋಜಿಗಗಳನ್ನು ತಿಳಿದಂತೆಲ್ಲಾ ನಮ್ಮ ವ್ಯಕ್ತಿತ್ವ ಪಕ್ವವಾಗುತ್ತದೆ. ಈ ಜ್ಞಾನ ಮತ್ತು ಹೊಂದಾಣಿಕೆಗಳ ಪ್ರಯತ್ನಗಳು ನಮ್ಮ ವ್ಯಕ್ತಿತ್ವವನ್ನು ಬೆಳೆಸುತ್ತವೆ. ಒಬ್ಬ ತಿಳಿದವನ ಜ್ಞಾನ ಪ್ರಭೆಯು ಪರಿಮಳದಂತೆ ಸುತ್ತಲೂ ಪಸರಿಸಿ ಇತರರನ್ನು ತನ್ನ ಪರಧಿಗೆ ಒಳಪಡಿಸಿಕೊಳ್ಳುತ್ತದೆ. ಜೀವನದ ನಿಜವಾದ ಅರ್ಥವನ್ನು ಸವಿಯಲು ಮತ್ತು ಇತರರಿಗೆ ಆ ಸವಿ ಮೂಡಿಸಲು ಉತ್ತಮರಿಗೆ ಮಾತ್ರ ಸಾಧ್ಯ. ತಿಳಿದವನು ಮಾತ್ರ ಬೆಳೆಯುತ್ತಾನೆ, ಬೆಳೆದವನು ಬದುಕನ್ನು ಸವಿಯುತ್ತಾನೆ, ನೀರಿನ ಹರಿವಿನಂತೆ ಸಾಗಿ ಸಾಗರದ ವೈಶಾಲ್ಯತೆಯಲ್ಲಿ ಸೇರಿ ಹೋಗುತ್ತಾನೆ. ಈ ತ್ರಿವಿಧ ಯತ್ನವೇ ನಿರಂತರ.

# ನಿರಂತರದೊಡನೆ .........

ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು

ಮಾತಿನಲಿ ಚೂಡಾಮಣಿಯಾಗು । ಕಂದಯ್ಯ

ಜ್ಯೋತಿಯೇ ಆಗು ಜಗಕೆಲ್ಲ

ಎಂಬುದು ನಮ್ಮ ಜನಪದರ ಹಂಬಲ ಮತ್ತು ಕನಸು. ಮಕ್ಕಳು ಅತ್ಯದ್ಭುತ ಸೃಷ್ಟಿ ; ಮನುಕುಲದ ಜೀವನಾಡಿ ಅವರು. ತಮ್ಮ ಭವಿಷ್ಯದಲ್ಲಿ ರೂಪಿಸಿಕೊಳ್ಳಬೇಕಾದ ಸದ್ವಿಚಾರಗಳ ಮಾರ್ಗಕ್ಕಾಗಿ ಪ್ರೀತಿಯಿಂದ, ತಾಳ್ಮೆಯಿಂದ ಅವರನ್ನು ತರಬೇತುಗೊಳಿಸಬೇಕು. ಆಗ ಆ ಮಕ್ಕಳು ಬೆಳೆದ ಮೇಲೆ ಆ ಹಾದಿಯಿಂದ ಎಂದೂ ಕದಲಲಾರರು.

ಎಳೆಯ ಮನಸ್ಸು ಹದವಾದ ಭೂಮಿಯಂತೆ, ಅಲ್ಲಿ ಮಾವು-ಬೇವು ಏನನ್ನಾದರೂ ಬಿತ್ತಬಹುದು. ಮಾಗಿದ ಫಲ ಇಲ್ಲ ಕಹಿ ಅನುಭವ ಎರಡೂ ನಮ್ಮದೇ ಆಯ್ಕೆ. ಆದ್ದರಿಂದ ಅದನ್ನು ಸಂಸ್ಕರಣಕ್ಕೊಳಪಡಿಸಬೇಕು. ಮುಗ್ಧ ಮನಸ್ಸಿನಲ್ಲಿ ಬರುವ ಸ್ವತಂತ್ರ ಆಲೋಚನೆಗಳನ್ನು ಗಮನಿಸಿ, ಅದಕ್ಕೊಂದು ದಿಕ್ಕನ್ನು ಒದಗಿಸುವ, ಅವರ ಸಂದೇಹಗಳಿಗೆ ಸೂಕ್ತ ಉತ್ತರಗಳನ್ನು ಸಿದ್ಧಪಡಿಸುತ್ತಾ ಒಂದು ನಿರ್ದಿಷ್ಟ ಗುರಿಯತ್ತ ಅವರು ಸಾಗುವಂತೆ ಮಾಡುವ ಜವಾಬ್ದಾರಿ ಈ ಸಮಾಜದ ಎಲ್ಲ ಹಿರಿಯರ ಮೇಲಿದೆ. ಅದಕ್ಕಾಗಿ ಬೆಳೆಯುವ ಮಕ್ಕಳ ಸ್ಪಂದನ ಶೀಲ ಮನಸ್ಸಿನ ರಚನೆಗೆ ಅರ್ಥಪೂರ್ಣ ರೂಪುರೇಷೆಗಳನ್ನು ನೀಡುತ್ತಾ, ಅತ್ಯುತ್ತಮ ವಿಚಾರ ನಡೆನುಡಿಗಳಿಂದ ಅವರ ವ್ಯಕ್ತಿತ್ವವನ್ನು ರೂಪಿಸಬೇಕು.

ಆ ನಿಟ್ಟಿನಲ್ಲಿ ಮಕ್ಕಳಲ್ಲಿ ಪ್ರೀತಿ, ಧೈರ್ಯ ಸಾಹಸ, ಶಿಸ್ತು, ಕುತೂಹಲ, ಆತ್ಮವಿಶ್ವಾಸ, ಸಹಬಾಳ್ವೆ, ಒಗ್ಗಟ್ಟು ನೈಪುಣ್ಯತೆಯನ್ನು ಬೆಳಸಲು, ಎಳೆಯ ಆ ಪುಟ್ಟ ಹೆಗಲುಗಳು ನಿಭಾಯಿಸಲು ಸಾಧ್ಯವಾದಷ್ಟೆ ಜವಾಬ್ದಾರಿಯನ್ನು ಸ್ವೀಕರಿಸಲು ಸಿದ್ಧವಾಗುವಂತೆ ಮಕ್ಕಳಿಗಾಗಿ ಒಂದು ಶಿಸ್ತುಬದ್ಧ ಅದ್ಭುತ ಸಂಘಟನೆಯನ್ನು ಕಟ್ಟಿದ ಕೀರ್ತಿ ಮಹಾಪುರುಷ ಬೇಡನ್ ಪೊವೆಲ್ ಅವರದ್ದು.

ಅವರು ಕಲ್ಪಿಸಿ ಸಾಕಾರಗೊಳಿಸಿ ಹಲವು ವಿಚಾರಗಳನ್ನು ಇಡುಕರಿಸಿ ನೆಟ್ಟ ಪುಟ್ಟ ಬೀಜ ಸ್ಕೌಟ್ಸ್ ಮೊಳಕೆಯೊಡೆದು ಸಸಿಯಾಗಿ ಬೆಳೆದು, ಗಿಡವಾಗಿ ತೂಗಿ, ಮರವಾಗಿ ಬಾಗಿ ಇಂದು ಬೃಹತ್ ವಟವೃಕ್ಷವಾಗಿ ನಿಂತಿದೆ. ಅದರ ರೆಂಬೆಕೊಂಬೆಗಳಿಂದು ವಿಶ್ವದ ನೂರಾರು ಕಡೆ ಹರಡಿವೆ. ಆ ವೃಕ್ಷದ ಎಳೆಯ ರೆಂಬೆಕೊಂಬೆಗಳು ಕಬ್ ಮತ್ತು ಬುಲ್‌ಬುಲ್ಸ್.

ಸ್ಕೌಟ್ಸ್ ಮತ್ತು ಗೈಡ್ಸ್ ಶಿಸ್ತುಬದ್ಧ ಸಂಘಟನೆಯ ಎಳೆಯ ರೆಂಬೆಗಳಾದರೂ. ಭವಿಷ್ಯದಲ್ಲಿ ಅವು ಭಾರೀವೃಕ್ಷದ ಬಹೃತ್ ಕೊಂಬೆಗಳಾಗುವ ಮುನ್ಸೂಚನೆಗಳಿವೆ.

ಮಕ್ಕಳ ಎಳೆಯ ಮನಸ್ಸುಗಳಲ್ಲಿ ದೇಶಭಕ್ತಿ, ವೈಯಕ್ತಿಕ ಹಾಗೂ ಸಾಮೂಹಿಕ ಶಿಸ್ತು, ಅವರಲ್ಲಿ ಅಡಕವಾಗಿರುವ ಸುಪ್ತ ಪ್ರತಿಭೆಯನ್ನು ಬೆಳಕಿಗೆ ತರಲು ಅವಕಾಶ, ಆ ನೈಪುಣ್ಯತೆಯ ಪ್ರದರ್ಶನಕ್ಕೆ ಒಂದು ವೇದಿಕೆ, ಸಮೂಹ ಜೀವನದ ಒಂದು ಅನುಭೂತಿ, ಸಂಕೋಚ ಸ್ವಾರ್ಥವನ್ನು ಕೊಡವಿಕೊಂಡು, ಧೈರ್ಯ

ಸಾಹಸಕ್ಕೆ ಮುಖಾಮುಖಿಯಾಗುವ ಅನನ್ಯ ಕ್ಷಣ ಕಬ್ ಮತ್ತು ಬುಲ್‌ಬುಲ್ ಉತ್ಸವ.

ರಾಜ್ಯಮಟ್ಟದ ಈ ಎಳೆಯರ ಉತ್ಸವ ಕಾಫಿಕಂಪಿನ ಅಂಗಳ ಚಿಕ್ಕಮಗಳೂರಿನಲ್ಲಿ ನವೆಂಬರ್ ೩ ರಿಂದ ೭ ರವರೆಗೆ ನಡೆಯಲಿದ್ದು ರಾಜ್ಯದಿಂದ ಆಗಮಿಸುತ್ತಿರುವ ಸಾವಿರಕ್ಕೂ ಹೆಚ್ಚು ಮಕ್ಕಳು ತಮ್ಮ ಸುತ್ತಮುತ್ತಲನ್ನು ತಿಳಿಯುವ, ಅದನ್ನು ತಿಳಿಯುತ್ತ ಸೀಮಿತ ಎಲ್ಲೆಯನ್ನು ದಾಟಿ ಯೋಚಿಸುತ್ತಾ ಬೆಳೆಯುವ, ಆ ಕ್ರಿಯಾಶೀಲ ಮನಸ್ಸು ಹೊಸ ಅನುಭವವನ್ನು ಸವಿಯುತ್ತಾ ನಿರ್ದಿಷ್ಟ ಗುರಿಯತ್ತ ನಿರಂತರವಾಗಿ ಸಾಗುವ, ಗುರಿಮುಟ್ಟುವವರೆಗೂ ಸಾಗುತ್ತಲೇ ಇರುವ ದೃಢ ಸಂಕಲ್ಪವನ್ನು ತೊಡಲು ಪ್ರೇರೇಪಿಸುವ ಉತ್ಸವ ಇದಾಗಿದೆ.

ಉತ್ಸವದ ನೆನಪು ಮಾಸದಂತೆ, ಮಸುಕಾಗದಂತೆ ಮಸುಕಾದಾಗ ಮತ್ತೆ ನೆನಪನ್ನು ಪುಟಿದೇಳಿಸುವ ಯತ್ನವೇ ಈ ನೆನಪಿನ ಸಂಚಿಕೆ 'ನಿರಂತರ'.

'ನಿರಂತರ' ಮಕ್ಕಳ ಮಾನಸಿಕ ಗೊಂದಲಗಳ ಬಗ್ಗೆ, ಮನೋವೈಕಲ್ಯದ ಬಗ್ಗೆ ಬೆಳಕು ಚೆಲ್ಲುವ ಲೇಖನದಿಂದ ಹಿಡಿದು, ಸ್ಕೌಟ್ಸ್ ಆಂದೋಲನದ ಬಗೆಗೆ ಅರಿವು ಮೂಡಿಸುವ, ಚಿಕ್ಕಮಗಳೂರು ಜಿಲ್ಲೆಯ ಸ್ಥೂಲ ಪರಿಚಯ ನೀಡುವ, ಇಲ್ಲಿನ ಹಸುರು ಪೊದೆಗಳಲ್ಲಿ ಚಿಲಿಪಿಲಿಗುಟ್ಟುವ ಹಕ್ಕಿಯ ಹೆಜ್ಜೆಯತ್ತ ಗಮನ ಸೆಳೆಯುವ, ಸ್ಕೌಟ್ ನೀಡಿದ ಅನುಭವ ಓರ್ವ ಶಿಕ್ಷಕನಾಗಿ, ಓರ್ವ ವಿದ್ಯಾರ್ಥಿಯಾಗಿ ಎದೆಯಾಳದಲ್ಲಿ ಹಸಿರಾಗಿರುವುದನ್ನು ವಿವರಿಸುವ ಲೇಖನಗಳನ್ನು ತನ್ನೊಳಗೆ ಹುದುಗಿಸಿಕೊಂಡಿದೆ.

ಹಾಗೆ ನಾಡಿನ, ದೇಶದ ಸಾರ್ವಜನಿಕ ಜೀವನದ ಮುಂಚೂಣಿಯಲ್ಲಿರುವವರ ಸಂದೇಶ, ಸ್ಕೌಟ್ ಆಂದೋಲನದ ಇತಿಹಾಸದ ದಾರಿ, ಅಲ್ಲಿ ಅಡ್ಡಾಡಿದ ಅಪರೂಪದ ವ್ಯಕ್ತಿಗಳ ಭಾವಚಿತ್ರ, ಹಳೆಯ ನೆನಪುಗಳನ್ನು ಕೆದಕುವ ಚಿತ್ರಾಂಕಣವೂ ಇದೆ. ಸೌಂದರ್ಯವಿದೆ. ಸಾಹಿತ್ಯವಿದೆ. ಇತ್ಯಾತ್ಮಕ ದೃಷ್ಟಿಕೋನವಿದೆ.

ಈ ಸುಂದರ ಸಂಚಿಕೆಗೆ ಕನಸುಗಳನ್ನು ಕಟ್ಟಿಕೊಂಡು ಭವಿಷ್ಯದಲ್ಲಿ ಅದಕ್ಕೆ ಸಾಕಾರರೂಪ ನೀಡುವ ಕಬ್, ಬುಲ್‌ಬುಲ್‌ಗಳ ಸಹಜ ಮುಖಗಳನ್ನೂ, ನೂರು ಅರ್ಥ ಸ್ಫುರಿಸುವಂತ ಅತ್ಯಂತ ಅರ್ಥಗರ್ಭಿತ ಮುಖ ಪುಟವನ್ನು ರಚಿಸಿಕೊಟ್ಟ ಕಲಾವಿದ, ಛಾಯಾಚಿತ್ರಕಾರ ಕೆ. ಪ್ರಕಾಶ್‌ಚೌಧರಿ ಅವರಿಗೆ, ಅಂದವಾಗಿ ಮುದ್ರಿಸಿದ ಗಾಯತ್ರಿ ಗ್ರಾಫಿಕ್ಸ್ ಮಂಜುನಾಥಜೋಷಿ ಅವರಿಗೆ, ನಿರಂತರವನ್ನು ಹೊರತರಲು ಪೂರ್ಣ ಸಹಕಾರ ಮತ್ತು ಪ್ರೋತ್ಸಾಹವನ್ನು ನೀಡಿದ ಮಾನ್ಯ ಜಿಲ್ಲಾಧಿಕಾರಿಗಳಾದ ಕೆ. ಆರ್. ಶ್ರೀನಿವಾಸ್ ಅವರಿಗೆ, ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪದಾಧಿಕಾರಿಗಳಿಗೆ, ತೋರಣದಷ್ಟೇ ಅಂದವಾಗಿ ಉತ್ತಮ ಲೇಖನಗಳನ್ನು ನೀಡಿ ಹೂರಣದ ರುಚಿ ಹೆಚ್ಚಿಸಿದ ಲೇಖಕರಿಗೆ ನನ್ನ ಹಾಗೂ ಸಂಪಾದಕ ಮಂಡಳಿಯ ಕೃತಜ್ಞತೆಗಳು.

ಸ. ಗಿರಿಜಾಶಂಕರ
ಪ್ರಧಾನ ಸಂಪಾದಕ








**Bhairon Singh Shekhawat**

# MESSAGE

I am glad to know that Bharat Scouts and Guides Karnataka Unit is hosting the "27th State Level Cubs and Bulbuls Utsav at Chikmagalur in the month of November 2003.

Bharat Scouts and Guides, Karnataka Unit, can take legitimate pride for the contribution it has made towards the growth of the Scouts and Guides. The Utsav provides a welcome oppurtunity to the children to show their talent and strengthen the Scouts and Guides Movement in the country.

My best whishes for the success of the Utsav.

**Bhairon Singh Shekhawat**
Vice President of India
His excellency vice president is also,
the chief patron of Bharath Scouts and Guides, India





ಎಸ್. ಎಂ. ಕೃಷ್ಣ

# ಸಂದೇಶ

ಶಿಸ್ತು, ಸಾಹಸ, ರಾಷ್ಟ್ರಾಭಿಮಾನದ ಬಗ್ಗೆ ಬಾಲ್ಯದಲ್ಲೇ ಮಕ್ಕಳಲ್ಲಿ ಅರಿವು ಮೂಡಿಸುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪ್ರಯತ್ನ ಇಂದು ನೆನ್ನೆಯದಲ್ಲ. ರಾಷ್ಟ್ರ ರಕ್ಷಣೆಯ ಕೆಲಸಗಳಿಗೆ ಮಕ್ಕಳನ್ನು ಸನ್ನದ್ಧಗೊಳಿಸುವತ್ತ ಈ ಸಂಸ್ಥೆ ಮಾಡಿರುವ ನಿರಂತರ ಶ್ರಮದಾನ ಮನನೀಯ.

ಪ್ರಸ್ತುತ ಚಿಕ್ಕಮಗಳೂರಿನಲ್ಲಿ ಕಬ್-ಬುಲ್‌ಬುಲ್ ಉತ್ಸವ ನಡೆಯುತ್ತಿರುವುದು ಈ ನಿಟ್ಟಿನಲ್ಲಿ ಮತ್ತೊಂದು ಹೆಜ್ಜೆ. ''ನಿರಂತರ'' ಎನ್ನುವ ನೆನಪಿನ ಸಂಚಿಕೆಯನ್ನು ಹೊರತರುತ್ತಿರುವುದು ಸಂತಸದ ವಿಷಯ.

ದೇಶಾಭಿಮಾನದ ಬಣ್ಣ ಬಣ್ಣದ ಕನಸನ್ನು ಕಣ್ಣಲ್ಲಿ ಹೊತ್ತ ಈ ಚಿಣ್ಣರ ಉತ್ಸವ ಯಶಸ್ಸಿನ ಗುರಿ ಮುಟ್ಟಲಿ ಎಂದು ಹಾರೈಸುತ್ತೇನೆ.

ಎಸ್. ಎಂ. ಕೃಷ್ಣ
ಮುಖ್ಯ ಮಂತ್ರಿ
ವಿಧಾನ ಸೌಧ, ಬೆಂಗಳೂರು - ೧





ಬಿ. ಎಲ್. ಶಂಕರ್

ದೂರವಾಣಿ : (ಕಛೇರಿ) : 2258575
2092325
(ನಿವಾಸ) : 3419999
3417777
(ಫ್ಯಾಕ್ಸ್) : 2252068
ವಿಧಾನ ಸೌಧ, ಬೆಂಗಳೂರು - ೧

# ಸಂದೇಶ

ಚಿಕ್ಕಮಗಳೂರು ನಗರದಲ್ಲಿ ನವೆಂಬರ್ ೩ ರಿಂದ ೭ ರ ತನಕ ರಾಜ್ಯ ಮಟ್ಟದ ಕಬ್-ಬುಲ್‌ಬುಲ್ ಉತ್ಸವ ನಡೆಯಲಿರುವುದಾಗಿಯೂ, ಈ ಸಮ್ಮೇಳನದ ಸವಿನೆನಪಿಗಾಗಿ ''ನಿರಂತರ'' ಎಂಬ ಸ್ಮರಣ ಸಂಚಿಕೆಯನ್ನು ಹೊರತರಲಾಗುವುದೆಂದು ತಿಳಿದು ಸಂತೋಷವಾಯಿತು.

ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ಏರ್ಪಡಿಸಲಾಗಿರುವ ಈ ಸಮ್ಮೇಳನದಲ್ಲಿ ಎಳೆ ವಯಸ್ಸಿನ ಶಾಲಾ ಮಕ್ಕಳು ಭಾಗವಹಿಸಿ ತಮ್ಮ ಜೀವನದಲ್ಲಿ ಶಿಸ್ತು ಮತ್ತು ಸಾಹಸ ಮಾತ್ರವಲ್ಲದೆ ರಾಷ್ಟ್ರಪ್ರೇಮದ ಬಗ್ಗೆ ಅರಿವು ಮಾಡಿಕೊಳ್ಳಲಿದ್ದಾರೆ.

ಶಾಲಾ ಮಕ್ಕಳಲ್ಲಿ ಶಿಸ್ತು ಮತ್ತು ಸಾಹಸ ಹಾಗೂ ರಾಷ್ಟ್ರಪ್ರೇಮದ ಅರಿವು ಮಾಡಿಕೊಟ್ಟು ಅವರು ಮುಂದೆ ಸತ್ಪ್ರಜೆಗಳಾಗಿ ಬಾಳುವಂತೆ ಸಹಾಯ ಮಾಡುವ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸೇವೆಯು ಪ್ರಶಂಸನೀಯವಾಗಿದೆ.

ಸಮ್ಮೇಳನವು ಯಶಸ್ವಿಯಾಗಿ ನೆರವೇರಲೆಂದು ಆಶಿಸುವುದರೊಂದಿಗೆ ''ನಿರಂತರ'' ವು ಉಪಯುಕ್ತ ಲೇಖನಗಳನ್ನೊಳಗೊಂಡು ಸಾರ್ವಜನಿಕರ ಮೆಚ್ಚುಗೆಗೆ ಪಾತ್ರವಾಗಲೆಂದು ಹಾರೈಸುತ್ತೇನೆ.

ಸಮ್ಮೇಳನದಲ್ಲಿ ಭಾಗವಹಿಸುವ ಎಲ್ಲಾ ಮಕ್ಕಳಿಗೆ ನನ್ನ ಶುಭಾಶಯಗಳು.

ಬಿ. ಎಲ್. ಶಂಕರ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು





ಡಿ. ಬಿ. ಚಂದ್ರೇಗೌಡ

ದೂರವಾಣಿ : (ಕಛೇರಿ) : 2254429
2092412
(ನಿವಾಸ) : 2205797
ವಿಧಾನ ಸೌಧ, ಬೆಂಗಳೂರು - ೧

# ಸಂದೇಶ

ಚಿಕ್ಕಮಗಳೂರು ನಗರದಲ್ಲಿ ನವೆಂಬರ್ ೩ ರಿಂದ ೭ ರವರೆಗೆ ರಾಜ್ಯ ಮಟ್ಟದ ೨೭ನೆಯ ಕಬ್ ಮತ್ತು ಬುಲ್ ಬುಲ್ ಉತ್ಸವ ಸಮಾವೇಶಗೊಳ್ಳುತ್ತಿರುವುದು ಸಂತೋಷದ ಸಂಗತಿ. ಇದನ್ನು ನಮ್ಮ ಜಿಲ್ಲೆಯಲ್ಲಿ ಸಂಘಟಿಸಿದವರಿಗೆಲ್ಲ ನನ್ನ ಅಭಿನಂದನೆಗಳು.

ಸ್ಕೌಟ್ಸ್ ಚಳವಳಿಯು ಮಕ್ಕಳನ್ನು ಶಿಸ್ತಿನ ಮತ್ತು ಹೊಣೆಗಾರಿಕೆಯ ನಾಗರಿಕರನ್ನಾಗಿ ರೂಪಿಸಲು ಇರುವಂತಹ ಒಂದು ಮಹತ್ವಪೂರ್ಣ ಚಳವಳಿ. ಈ ಚಳವಳಿಯನ್ನು ಉತ್ತೇಜಿಸಿ, ಭವಿಷ್ಯದ ಸಭ್ಯ ಜನಾಂಗವನ್ನು ರೂಪಿಸುವ ದೃಷ್ಟಿಯಿಂದ ನಮ್ಮ ಸರ್ಕಾರವು ಸ್ಕೌಟ್ಸ್ ಚಳವಳಿಗೆ ಹೆಚ್ಚಿನ ಸಹಕಾರ ನೀಡುತ್ತಿದೆ. ಈ ಮೂಲಕ ಗೌರವಾನ್ವಿತ ಸಮಾಜ ನಿರ್ಮಾಣ ನಮ್ಮ ಹೆಬ್ಬಯಕೆ.

ಮುಂದಿನ ದಿನಗಳಲ್ಲೂ ಈ ಚಳವಳಿಗೆ ನಿರಂತರ ಬೆಂಬಲ ನೀಡಿ, ಸದೃಢ, ಸೌಹಾರ್ದಯುತ ಸಮಾಜ ನಿರ್ಮಾಣಕ್ಕೆ ಶ್ರಮಿಸೋಣ, ಈ ಜಿಲ್ಲೆಯು ಈ ನಿಟ್ಟಿನಲ್ಲಿ ಮತ್ತಷ್ಟು ಉನ್ನತ ಸ್ಥಾನ ಪಡೆಯುವಂತಾಗಲಿ ಎಂದು ಆಶಿಸುತ್ತಾ, ರಾಜ್ಯಮಟ್ಟದ ಈ ಉತ್ಸವವು ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

*ಡಿ. ಬಿ. ಚಂದ್ರೇಗೌಡ*
ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು






ಮೋಟಮ್ಮ

ದೂರವಾಣಿ : (ಕಛೇರಿ) : 2258089
2092532
(ನಿವಾಸ) : 3414334
3410183
ವಿಧಾನ ಸೌಧ, ಬೆಂಗಳೂರು - ೧

# ಸಂದೇಶ

ಚಿಕ್ಕಮಗಳೂರು ನಗರದ ಪ್ರಶಾಂತ ಪರಿಸರದಲ್ಲಿ ನವೆಂಬರ್ ೩ ರಿಂದ ೭ ರವರೆಗೆ ರಾಜ್ಯ ಮಟ್ಟದ ಕಬ್ - ಬುಲ್‌ಬುಲ್ ಉತ್ಸವ ನಡೆಯಲಿದ್ದು "ತಿಳಿ-ಬೆಳಿ-ಸವಿ" ಎಂಬ ಉದ್ದೇಶದೊಂದಿಗೆ ೫ ರಿಂದ ೧೦ ವರ್ಷದೊಳಗಿನ ಶಾಲಾ ಮಕ್ಕಳಿಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ಏರ್ಪಡಿಸಿದ್ದು ರಾಜ್ಯದ ವಿವಿಧ ಜಿಲ್ಲೆಗಳಿಂದ ಸುಮಾರು ೧,೫೦೦ ಮಕ್ಕಳು ಉತ್ಸವದಲ್ಲಿ ಪಾಲ್ಗೊಳ್ಳುತ್ತಿರುವ ವಿಷಯವನ್ನು ತಿಳಿದು ಸಂತೋಷವಾಯಿತು. ಹಾಗೂ ಈ ಸಮ್ಮೇಳನದ ಸವಿನೆನಪಿಗಾಗಿ "ನಿರಂತರ" ಎಂಬ ನೆನಪಿನ ಸಂಚಿಕೆಯನ್ನು ಹೊರತರುತ್ತಿರುವ ವಿಷಯ ನಿಜಕ್ಕೂ ಹೆಚ್ಚಿನ ಸಂತೋಷತಂದಿದೆ. ಈ ಸಂಚಿಕೆಯು ಅತ್ಯಂತ ಹೆಚ್ಚಿನ ಉಪಯುಕ್ತತೆಯನ್ನು ಹೊಂದಿ ಶಾಲಾ ಮಕ್ಕಳು ಹಾಗೂ ಸಾರ್ವಜನಿಕರು ಸ್ಪಂದಿಸುವಂತಹ ಉತ್ತಮ ಸಂಚಿಕೆಯಾಗಲಿ ಎಂದು ಹಾರೈಸುತ್ತೇನೆ.

ಮೋಟಮ್ಮ
ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು




ದೂರವಾಣಿ : (ಕಛೇರಿ) : 2251772
2092484
(ನಿವಾಸ) : 3338255
(ಫ್ಯಾಕ್ಸ್) : 3335978
ವಿಧಾನ ಸೌಧ, ಬೆಂಗಳೂರು - ೧



ಸಿ. ಆರ್. ಸಗೀರ್ ಅಹ್ಮದ್

# ಸಂದೇಶ

ಚಿಕ್ಕಮಗಳೂರು ನಗರದಲ್ಲಿ ನವೆಂಬರ್ ೩ ರಿಂದ ೭ ರವರೆಗೆ ರಾಜ್ಯ ಮಟ್ಟದ ಕಬ್ - ಬುಲ್‌ಬುಲ್ ಉತ್ಸವ ನಡೆಯಲಿದ್ದು, "ತಿಳಿ-ಬೆಳಿ-ಸವಿ" ಎಂಬ ಉದ್ದೇಶದೊಂದಿಗೆ ಶಾಲಾ ಮಕ್ಕಳಿಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ಉತ್ಸವಕ್ಕೆ ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸುವ ಮಕ್ಕಳಿಗೆ ರಾಷ್ಟ್ರಪ್ರೇಮದ ಬಗ್ಗೆ ಅರಿವನ್ನು ಮೂಡಿಸುವ ಸಲುವಾಗಿ ಸಮ್ಮೇಳನದ ಸವಿನೆನಪಿಗಾಗಿ "ನಿರಂತರ" ಎಂಬ ನೆನಪಿನ ಸಂಚಿಕೆಯನ್ನು ಹೊರತರುತ್ತಿರುವುದು ತುಂಬಾ ಶ್ಲಾಘನೀಯ.

ಕಬ್ - ಬುಲ್‌ಬುಲ್ ಉತ್ಸವದ ಶುಭ ಸಂದರ್ಭದಲ್ಲಿ ಪ್ರಕಟಿಸುತ್ತಿರುವ "ನಿರಂತರ" ಎಂಬ ಸಂಚಿಕೆಯು ವಿದ್ಯಾರ್ಥಿಗಳ ಜ್ಞಾನಾರ್ಜನೆಯನ್ನು ಹೆಚ್ಚಿಸಲು ನಿಜಕ್ಕೂ ಸಹಾಯವಾಗುವುದಾಗಿ ತಿಳಿಸುತ್ತಾ, ಮತ್ತೊಮ್ಮೆ ಹುತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಸಿ. ಆರ್. ಸಗೀರ್ ಅಹಮದ್
ವಸತಿ ಸಚಿವರು






ಪ್ರೊ. ಬಿ. ಕೆ. ಚಂದ್ರಶೇಖರ್

ದೂರವಾಣಿ : (ಕಛೇರಿ) : 2251639
(ನಿವಾಸ) : 6714068
(ಫ್ಯಾಕ್ಸ್) : 2252068
ವಿಧಾನ ಸೌಧ, ಬೆಂಗಳೂರು - ೧

# ಸಂದೇಶ

೫ ರಿಂದ ೧೦ ವರ್ಷದೊಳಗಿನ ಶಾಲಾ ಮಕ್ಕಳಿಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಚಿಕ್ಕಮಗಳೂರು ನಗರದಲ್ಲಿ ದಿನಾಂಕ ೩-೧೧-೨೦೦೩ ರಿಂದ ೭-೧೧-೨೦೦೩ ರವರೆವಿಗೆ ರಾಜ್ಯ ಮಟ್ಟದ ಕಬ್-ಬುಲ್‌ಬುಲ್ ಉತ್ಸವವನ್ನು ಹಮ್ಮಿಕೊಂಡಿರುವುದು ಸಂತೋಷದ ವಿಷಯವಾಗಿದೆ. ಹಾಗೂ ಈ ಸುಸಂದರ್ಭದಲ್ಲಿ ಇದರ ಸವಿನೆನಪಿಗಾಗಿ 'ನಿರಂತರ' ಎಂಬ ನೆನಪಿನ ಸಂಚಿಕೆಯನ್ನು ಹೊರತರುತ್ತಿರುವುದು ಶ್ಲಾಘನೀಯ ವಿಚಾರ. ಇಂತಹ ಕಾರ್ಯಕ್ರಮಗಳು ನಡೆಯುತ್ತಿದ್ದಲ್ಲಿ ಮಕ್ಕಳಲ್ಲಿ ಶಿಸ್ತು, ಸಂಯಮವನ್ನು ಬೆಳೆಸಿಕೊಳ್ಳಲು ಸಹಕಾರಿಯಾಗಲಿದೆ. ಹಾಗೂ ರಾಷ್ಟ್ರ ಪ್ರೇಮವನ್ನು ಮೈಗೂಡಿಸಿಕೊಳ್ಳಲು ಉತ್ತೇಜನಕಾರಿಯಾಗಿರುತ್ತದೆ. ಜೊತೆಗೆ ತಾವು ಪ್ರಕಟಿಸುತ್ತಿರುವ ನೆನಪಿನ ಸಂಚಿಕೆಯಲ್ಲಿ ಶಾಲಾ ಮಕ್ಕಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಬಗ್ಗೆ ಆಸಕ್ತಿಯನ್ನು ಮೂಡಿಸುವಂತಹ ಲೇಖನಗಳಿಂದ ಹೊರಹೊಮ್ಮಲಿ ಎಂದು ಆಶಿಸುತ್ತಾ, ತಾವು ಹಮ್ಮಿಕೊಂಡಿರುವ ಈ ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಲಿ ಎಂದು ಶುಭವನ್ನು ಹಾರೈಸುತ್ತೇನೆ.

*ಬಿ. ಕೆ. ಚಂದ್ರಶೇಖರ್*
*ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ರಾಜ್ಯ ಸಚಿವರು*





ಡಿ. ಹೆಚ್. ಶಂಕರಮೂರ್ತಿ

ದೂರವಾಣಿ : (ಕಛೇರಿ) : 2257323
2092528
(ನಿವಾಸ) : 2209134
(ಫ್ಯಾಕ್ಸ್) : 2250335
ವಿಧಾನ ಸೌಧ, ಬೆಂಗಳೂರು - ೧

# ಸಂದೇಶ

ತಿಳಿ-ಬೆಳಿ-ಸವಿ ಎಂಬ ಉದ್ದೇಶದೊಂದಿಗೆ ೫ ರಿಂದ ೧೦ ವರ್ಷದೊಳಗಿನ ಶಾಲಾ ಮಕ್ಕಳಿಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಆಶ್ರಯದಲ್ಲಿ ರಾಜ್ಯಮಟ್ಟದ ಕಬ್-ಬುಲ್‌ಬುಲ್ ಉತ್ಸವ ನಡೆಸುತ್ತಿದ್ದು, ಅದೇ ಸಂದರ್ಭದಲ್ಲಿ ಸಮ್ಮೇಳನದ ಸವಿನೆನಪಿಗಾಗಿ ''ನಿರಂತರ'' ಎಂಬ ನೆನಪಿನ ಸಂಚಿಕೆಯನ್ನು ಹೊರತರುತ್ತಿರುವುದು ಸಂತೋಷದ ವಿಷಯವಾಗಿದೆ.

ಪುಟ್ಟ ಮಕ್ಕಳು ಈ ಕಾರ್ಯಕ್ರಮದ ಮೂಲಕ ರಾಷ್ಟ್ರಪ್ರೇಮದ ಬಗೆಗೆ ಅರಿವನ್ನು ಮೈಗೂಡಿಸಿಕೊಳ್ಳುವಂತಾಗಲಿ ಹಾಗೂ ಕಾರ್ಯಕ್ರಮ ಸಂಪೂರ್ಣ ಯಶಸ್ವಿಯಾಗಲಿ ಎಂದು ಹಾರೈಸುತ್ತಾ ಶುಭ ಕೋರುತ್ತೇನೆ.

ಡಿ. ಹೆಚ್. ಶಂಕರಮೂರ್ತಿ
ವಿರೋಧ ಪಕ್ಷದ ನಾಯಕ
ಕರ್ನಾಟಕ ವಿಧಾನ ಪರಿಷತ್ತು




ಎ. ಎಸ್. ಮಹೇಶ್

ದೂರವಾಣಿ : (ಕಛೇರಿ) : 220479
(ನಿವಾಸ) : 237888
ಚಿಕ್ಕಮಗಳೂರು - ೫೭೭ ೧೦೧

# ಸಂದೇಶ

ಪಶ್ಚಿಮ ಘಟ್ಟದ ತಡಿಯ ಪುಟ್ಟನಗರ ಚಿಕ್ಕಮಗಳೂರಿನಲ್ಲಿ ನವೆಂಬರ್ ೩ರಿಂದ ೭ರವರೆಗೆ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಆಶ್ರಯದಲ್ಲಿ ರಾಜ್ಯಮಟ್ಟದ ೨೭ನೆಯ ಕಬ್ ಮತ್ತು ಬುಲ್ ಬುಲ್ ಉತ್ಸವ ನಡೆಯುತ್ತಿರುವುದು ಸಂತೋಷದ ವಿಷಯ. ಎಳೆಯ ಮಕ್ಕಳಲ್ಲಿ ಶಿಸ್ತು, ಸೌಹಾರ್ದತೆ, ದೇಶಪ್ರೇಮ ಹಾಗೂ ಅವರೊಳಗವಿತಿರುವ ಪ್ರತಿಭೆ ಹೊರಮ್ಮಿಸಲು ಈ ಉತ್ಸವ ಒಂದು ಅತ್ಯಂತ ಉತ್ತಮ ವೇದಿಕೆ ಎಂದು ನಾನು ಭಾವಿಸಿದ್ದೇನೆ. ಈ ಸಂದರ್ಭದಲ್ಲಿ ಸಮ್ಮೇಳನದ ಸವಿನೆನಪನ್ನು ನಿರಂತರ ಗೊಳಿಸಲು ಹೊರತರುತ್ತಿರುವ ನೆನಪಿನ ಸಂಚಿಕೆ ಒಂದು ಸ್ತುತ್ಯಾರ್ಹ ಪ್ರಯತ್ನ. ಉತ್ಸವ ಅತ್ಯಂತ ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ಎ. ಎಸ್. ಮಹೇಶ್
ಅಧ್ಯಕ್ಷರು,
ಜಿಲ್ಲಾಪಂಚಾಯಿತಿ, ಚಿಕ್ಕಮಗಳೂರು



*ಎಚ್. ಸಿ. ಕಿಶೋರಚಂದ್ರ*

# ಸಂದೇಶ

ಕರ್ನಾಟಕ ಬಾಲಕ-ಬಾಲಕಿಯರಿಗೆ ವಿದ್ಯಾರ್ಥಿ ದಿಸೆಯಲ್ಲಿಯೇ ಶಿಸ್ತು, ರಾಷ್ಟ್ರಪ್ರೇಮ, ಸೃಜನಶೀಲ ಚಟುವಟಿಕೆಗಳಲ್ಲಿ ಆಸಕ್ತಿ ಬೆಳಸುತ್ತಾ ಯಶಸ್ವಿಯಾಗಿ ದಶಕಗಳಿಂದಲೂ ಕಾರ್ಯನಿರ್ವಹಿಸುತ್ತಾ ಬಂದಿರುವ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ ಸಂಸ್ಥೆಯು ೨೭ನೆಯ ರಾಜ್ಯಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವವನ್ನು ನವೆಂಬರ್ ೩ ರಿಂದ ೭, ೨೦೦೩ ರವರೆಗೆ ಚಿಕ್ಕಮಗಳೂರಿನ ಸುಭಾಷ್ ಚಂದ್ರಬೋಸ್ ಜಿಲ್ಲಾ ಆಟದ ಮೈದಾನದಲ್ಲಿ ಏರ್ಪಡಿಸುತ್ತಿರುವುದು ಸಂತೋಷದ ಸಂಗತಿ.

ಈ ಉತ್ಸವದಲ್ಲಿ ೫ ರಿಂದ ೧೦ ವರ್ಷದ ಸುಮಾರು ೧೫೦೦ ಬಾಲಕ-ಬಾಲಕಿಯರು ಕರ್ನಾಟಕದ ವಿವಿಧ ಭಾಗಗಳಿಂದ ಬಂದು ಪಾಲ್ಗೊಳ್ಳುತ್ತಿರುವುದು ಹಾಗೂ ನೆರೆ ರಾಜ್ಯಗಳಿಂದ ಅತಿಥಿಗಳು ಬಂದು ಭಾಗವಹಿಸುತ್ತಿರುವುದು ಹರ್ಷದಾಯಕ ವಿಷಯವಾಗಿದೆ.

ಈ ಸಂದರ್ಭದಲ್ಲಿ ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್, ಕರ್ನಾಟಕ ಸಂಸ್ಥೆಯು ಹೊರತರುತ್ತಿರುವ ನೆನಪಿನ ಸಂಚಿಕೆ ಅರ್ಥಪೂರ್ಣವಾಗಿ ಪ್ರಕಟವಾಗಲಿ ಎಂದು ಮತ್ತು ಉತ್ಸವವು ಎಲ್ಲಾ ರೀತಿಯಲ್ಲಿ ಯಶಸ್ವಿಯಾಗಿ ಜರುಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

*ಎಚ್. ಸಿ. ಕಿಶೋರ್‌ಚಂದ್ರ*
ರಾಜ್ಯಯುವಕ ಕೇಂದ್ರ, ನೃಪತುಂಗ ರಸ್ತೆ
ಬೆಂಗಳೂರು - ೧





ದೂರವಾಣಿ : 6701227
6708776
(ಫ್ಯಾಕ್ಸ್) : 080-6708803
ಬೆಂಗಳೂರು - ೨

ಕೊಂಡಜ್ಜಿ ಬಿ. ಷಣ್ಮುಖಪ್ಪ

# ಸಂದೇಶ

ಸ್ಕೌಟ್-ಗೈಡ್ ಚಳವಳಿ ಮಾನವ ಸಂಪನ್ಮೂಲ ಅಭಿವೃದ್ಧಿಪಡಿಸುವ ಮಹತ್ವಾಕಾಂಕ್ಷೆಯುಳ್ಳ ಅಂತಾರಾಷ್ಟ್ರೀಯ ಸಂಘಟನೆ.

ಯುವಜನಾಂಗದಲ್ಲಿ ಶಿಸ್ತು-ಸಂಯಮ-ಸೇವೆ-ಆತ್ಮವಿಶ್ವಾಸ ಮೂಡಿಸುವ ಚಿಂತನೆಗಳನ್ನು ಬೆಳೆಸಿ-ಅವರಿಂದ ನೆರೆಹೊರೆಗೆ-ಸಮಾಜಕ್ಕೆ ಆಸರೆಯಾಗುವ ಹಲವಾರು ಚಟುವಟಿಕೆಗಳಲ್ಲಿ ತೊಡಗಿಸುವುದಲ್ಲದೆ-ಮುಂದಿನ ದಿನಗಳಲ್ಲಿ ಅವರು ಸಮಾಜದ ಸಭ್ಯ ಹಾಗೂ ರಾಷ್ಟ್ರ ಪ್ರಜ್ಞೆಯುಳ್ಳನಾಗರಿಕರನ್ನಾಗಿ ನಿರ್ಮಾಣ ಮಾಡಲಾಗುತ್ತದೆ.

ರಾಜ್ಯದಲ್ಲಿ, ಚಿಕ್ಕಮಗಳೂರು ಜಿಲ್ಲೆ ಸ್ಕೌಟ್-ಗೈಡ್ ಚಟುವಟಿಕೆಯಲ್ಲಿ ತನ್ನದೇ ಆದ ಛಾಪು ಮೂಡಿಸಿರುವ ಹೆಮ್ಮೆಯ ಜಿಲ್ಲೆ. ಅನೇಕಷ್ಟು ಸ್ಕೌಟ್-ಗೈಡ್ ನಾಯಕರು ಚಳವಳಿಯ ಬೆಳವಣಿಗೆಯಲ್ಲಿ ತೊಡಗಿಸಿಕೊಂಡು ಯುವಜನಾಂಗಕ್ಕೆ ಉತ್ತಮ ಆದರ್ಶ ಹಾಗೂ ನಾಯಕತ್ವದ ಗುಣಗಳನ್ನು ಮೈಗೂಡಿಸಿಕೊಳ್ಳಲು ನೆರವಾಗಿದ್ದಾರೆ. ಅವರೆಲ್ಲರಿಗೂ ರಾಜ್ಯ ಸ್ಕೌಟ್ ಸಂಸ್ಥೆಯ ಹಾರ್ದಿಕ ಅಭಿನಂದನೆಗಳು.

ಚಳವಳಿಯು ಜಿಲ್ಲೆ ಹಾಗೂ ರಾಜ್ಯದಲ್ಲಿ ಬೆಳೆದು ಬಂದ ಹೆಜ್ಜೆಗಳನ್ನು ಗುರುತಿಸಿ-ಆ ಮುಖೇನ ಮುಂದಿನ ಕಾರ್ಯಗಳನ್ನು ಯೋಜಿಸಲು ದಿನಾಂಕ ೩-೧೧-೨೦೦೩ ರಿಂದ ೭-೧೧-೨೦೦೩ ರವರೆಗೆ ಜರುಗುವ ೨೭ನೆಯ ರಾಜ್ಯ ಕಬ್-ಬುಲ್ ಬುಲ್ ಉತ್ಸವದ ಶುಭ ಸಂದರ್ಭದಲ್ಲಿ ''ನೆನಪಿನ ಸಂಚಿಕೆ'' ಹೊರತರುವ ನಿರ್ಧಾರ ಅತ್ಯಂತ ಸ್ತುತ್ಯಾರ್ಹವಾದುದು.

ನೆನಪಿನ ಸಂಚಿಕೆ ಜಿಲ್ಲೆಯಲ್ಲಿ ಸ್ಕೌಟ್-ಗೈಡ್. ಚಳವಳಿ ಬೆಳೆದ ವಿವಿಧ ಮುಖಗಳನ್ನು ಹಾಗೂ ಚಳವಳಿಯ ಆದರ್ಶಗಳನ್ನು ಸಮಾಜಕ್ಕೆ ಪರಿಚಯಿಸುವಲ್ಲಿ ಸಂಪಾದಕ ಮಂಡಳಿ ಯಶಸ್ಸು ಕಾಣಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಜಿಲ್ಲೆಯ ಎಲ್ಲಾ ಶಾಲೆ-ಕಾಲೇಜುಗಳಲ್ಲಿ ಕಬ್, ಬುಲ್ ಬುಲ್, ಸ್ಕೌಟ್-ಗೈಡ್, ರೋವರ್, ರೇಂಜರ್ ಘಟಕಗಳನ್ನು ತೆರೆದು-ಯುವಕ ಯುವತಿಯರಲ್ಲಿ ಸ್ಕೌಟ್-ಗೈಡ್ ಆದರ್ಶ-ತತ್ವಗಳನ್ನು ಬಿತ್ತುವಲ್ಲಿ ತಮಗೆ ಯಶಸ್ಸು ದೊರೆಯಲಿ ಎಂದು ಪ್ರಾರ್ಥಿಸುತ್ತೇನೆ.

ಜಿಲ್ಲೆಯ ಹಾಗೂ ಸ್ಥಳೀಯ ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳಿಗೆ, ಉತ್ಸವ ಯಶಸ್ಸು ಕಾಣಲು ಹಗಲಿರುಳು ಶ್ರಮಿಸುತ್ತಿರುವ ಮಾನ್ಯ ಜಿಲ್ಲಾಧಿಕಾರಿಗಳು, ಜಿಲ್ಲಾ ಸಂಸ್ಥೆಯ ಗೌರವಾನ್ವಿತ ಅಧ್ಯಕ್ಷರಾದ ಶ್ರೀ ಕೆ. ಆರ್. ಶ್ರೀನಿವಾಸ್, ಭಾ.ಆ.ಸೇ ಅವರಿಗೆ, ಜಿಲ್ಲೆಯ ವಿವಿಧ ಅಧಿಕಾರಿಗಳಿಗೆ - ಸಾರ್ವಜನಿಕ ಸಂಸ್ಥೆಗಳ ಮುಖ್ಯಸ್ಥರುಗಳಿಗೆ ಹಾಗೂ ಜಿಲ್ಲೆಯ ಎಲ್ಲಾ ಸಂಘ ಸಂಸ್ಥೆಗಳಿಗೆ, ಸಂಸ್ಥೆಯ ಹಿತಚಿಂತಕರಿಗೆ, ಸಾರ್ವಜನಿಕರಿಗೆ ರಾಜ್ಯ ಸ್ಕೌಟ್ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

*ಕೊಂಡಜ್ಜಿ ಬಿ. ಷಣ್ಮುಖಪ್ಪ*
*ರಾಜ್ಯ ಮುಖ್ಯ ಆಯುಕ್ತರು, ಸ್ಕೌಟ್ಸ್*





**C. R. Mohammed Zahiruddin,** B.A., B.L.,

# MESSAGE

It gives me pleasure to note that state Level 27th Cub and Bulbul Utsav will be held in the District Play Grounds of Chikmagalur from 3rd November 2003 to 7th November 2003.

I am very happy taht the young children from all ever the State will be attending the above event where in several activities such as Adventure activities, Folk Fest, Drawing and painting Competition on enviroment are some of the Importatnt activities taht will be imparted to young children to make them good citizens.

I wish the Cub and Bulbul Utsav a grand success and hope that the children will enjoy this great event.

**C. R. Mohammed Zahiruddin**
State Commissioner (Scouts)
State Head Quarters
Prof. P. Shivashankar Circle,
Kondajji Basappa Raod,
Fort, Bangalore - 560 002



# MESSAGE

It gives me immense pleasure to learn that 27th state Cub and Bulbul Utsav is being held in Chikmagalur.

With the lessons learnt, through activities, the songs sung, the games played and the camping life to inculcate brotherhood. I am sure, the little participants will walk into the social life, with the values of life for ever.

I wish the UTSAV all Success.

**Mrs. M. G. Bopaiah**
State Commissioner (Guide)
Vice President, National
Association of Bharath
Scouts & Guides



*ಕೆ. ಆರ್. ಶ್ರೀನಿವಾಸ್, ಭಾ.ಆ.ಸೇ.,*

# ಮನಸ್ಸು ಅರಳಲಿ

ಮಕ್ಕಳ ಮನಸ್ಸು ಹೂವಿನಂತೆ, ಅತೀ ಸುಂದರ ಮತ್ತು ಅತೀ ಸೂಕ್ಷ್ಮ. ಈ ಸೂಕ್ಷ್ಮವಾದ ಮನೋಭೂಮಿಕೆಯಲ್ಲಿ ಶಿಸ್ತು ಕುತೂಹಲ ನೈಪುಣ್ಯತೆ, ಧೈರ್ಯ, ಸಾಹಸ, ದೇಶಪ್ರೇಮವನ್ನು ಅರಳಿಸುವ ಕಾರ್ಯವಾಗಬೇಕು. ಈ ಪ್ರಕ್ರಿಯೆ ಮನೆಗಳಲ್ಲಿ ವ್ಯಕ್ತಿಗತ ಮಟ್ಟದಲ್ಲಿ ಪೂರ್ಣವಾಗಿ ಆಗುವುದೆಂದು ಭಾವಿಸುವುದಕ್ಕಿಂತ ಸಾಮೂಹಿಕ ನೆಲೆಯಲ್ಲಿ ಆಗುವ ಅನುಭವ, ಒಡನಾಟ ಹೆಚ್ಚು ಪರಿಪೂರ್ಣವೆಂಬುದು ನನ್ನ ಭಾವನೆ. ಜಾತಿ, ಧರ್ಮ, ಸ್ವಾರ್ಥ-ಸಂಕುಚಿತದ ಬೇಲಿಗಳಿಲ್ಲದ ಆ ಮುಗ್ದಮನಸ್ಸುಗಳಲ್ಲಿ ಒಂದು ಆರೋಗ್ಯ ಪೂರ್ಣ ವ್ಯಕ್ತಿತ್ವವನ್ನು ಬೆಳೆಸುವುದು ಅತ್ಯಂತ ಅವಶ್ಯಕ. ಈ ನಿಟ್ಟಿನಲ್ಲಿ ಐದರಿಂದ ಹತ್ತುವರ್ಷದ ಮಕ್ಕಳನ್ನು ಸಮವಸ್ತ್ರಧಾರಿಗಳಾಗಿಸಿ ಐದು ದಿನಗಳ ಕಾಲ ಅವರು ಒಟ್ಟಾಗಿ ಹಲವು ವಿಷಯಗಳನ್ನು ತಿಳಿಯಲು, ಅದನ್ನು ತಿಳಿಯುತ್ತಾ ಬೆಳೆಯಲು, ಆ ಬೆಳವಣಿಗೆಯ ಸವಿಯನ್ನು ಮತ್ತೆ ಮತ್ತೆ ಮೆಲಕು ಹಾಕಲು ನಗರದಲ್ಲಿ ನವೆಂಬರ್ ಮೂರರಿಂದ ಏಳರವರೆಗೆ ರಾಜ್ಯಮಟ್ಟದ ೨೭ನೆಯ ಕಬ್ ಮತ್ತು ಬುಲ್‌ಬುಲ್ ಉತ್ಸವ ಒಂದು ಉತ್ತಮ ಅವಕಾಶ. ಇಲ್ಲಿ ಆ ಎಳೆಯ ಮಕ್ಕಳು ಹಾಡುತ್ತಾ, ಕುಣಿಯುತ್ತಾ ತಮ್ಮೊಳಗಿನ ಪ್ರತಿಭೆಗಳಿಗೆ ರೆಕ್ಕೆ ಸಿಕ್ಕಿಸಿ ಅದು ಸ್ವಚ್ಛಂದವಾಗಿ ಹೊರಹೊಮ್ಮುವಂತೆ ಮಾಡುವ ಮುಖ್ಯ ಉದ್ದೇಶವನ್ನು ಈ ಉತ್ಸವ ಹೊಂದಿದೆ.

ಎಂಟು ದಶಕಗಳ ನಂತರ ನಗರದಲ್ಲಿ ಸ್ಕೌಟ್ ಮತ್ತು ಗೈಡ್ ಸಂಸ್ಥೆ ಆಶ್ರಯದಲ್ಲಿ ರಾಜ್ಯ ಮಟ್ಟದ ಸಮಾವೇಶ ನಡೆಯುತ್ತಿದ್ದು ಈ ಸಮಾವೇಶದ ಯಶಸ್ಸಿಗೆ ತಮ್ಮ ಸಹಕಾರ ಹಸ್ತ ನೀಡಿ ಪೂರ್ಣ ಪರಿಶ್ರಮ ಹಾಕುತ್ತಿರುವ ಈ ಜಿಲ್ಲೆಯವರೆ ಆದ ವಿಧಾನ ಪರಿಷತ್ ಸಭಾಪತಿಗಳನ್ನು, ಜಿಲ್ಲೆಯ ಮೂವರು ಮಾನ್ಯ ಸಚಿವರುಗಳನ್ನು, ಶಾಸಕರು ಮತ್ತು ಎಲ್ಲಾ ಜನಪ್ರತಿನಿಧಿಗಳನ್ನು ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆ ಪದಾಧಿಕಾರಿಗಳನ್ನು ಈ ಸಂದರ್ಭದಲ್ಲಿ ನಾನು ಕೃತಜ್ಞತಾ ಪೂರ್ವಕವಾಗಿ ನೆನೆಯಲು ನನಗೆ ಸಂತಸವಾಗುತ್ತದೆ. ಉತ್ಸವದ ನೆನಪನ್ನು ಚಿರಂತನವಾಗಿಸಲು ಹೊರತರುತ್ತಿರುವ ''ನಿರಂತರ'' ನೆನಪಿನ ಸಂಚಿಕೆಯ ಸಂಪಾದಕ ಮಂಡಳಿಗೆ ಅದರ ಮೌಲ್ಯ ಹೆಚ್ಚಿಸಿದ ಲೇಖಕರಿಗೆ ನನ್ನ ಕೃತಜ್ಞತೆಗಳು.

ಈ ಹಸುರಿನಂಗಳದಲ್ಲಿ ಐದುದಿನಗಳ ಕಾಲ ನಡೆಯುತ್ತಿರುವ ಈ ಉತ್ಸವ ಹೃನ್ಮನ ತಣಿಸುವ ಆ ಹಸುರಿನಂತೆಯೇ ಎಲ್ಲರ ನೆನಪಿನಂಗಳದಲ್ಲಿ, ಮಕ್ಕಳ ಮನಸ್ಸಿನಲ್ಲಿ ಹಚ್ಚಹಸುರಾಗಿರುತ್ತದೆಂಬ ಆಶಯ ನನ್ನದು.

*ಕೆ. ಆರ್. ಶ್ರೀನಿವಾಸ್*
**ಜಿಲ್ಲಾಧಿಕಾರಿಗಳು ಮತ್ತು ಗೌರವಾಧ್ಯಕ್ಷರು,**
**ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿಕ್ಕಮಗಳೂರು**





B. R. Sachidanand

## BETWEEN US............

Making the future of the young more comfortable, the place we live in more beautiful is not just the responsibility of all of us today. It indeed is an obligation too.

How I wish the children learnt more in the " open School" than within the closed doors? How I wish children giggle, sing, laugh, dance merry around in the midst of nature and thus inculcate the true spirit of life " Make others life Happy by being Happy" ? How I wish children take themselves lightly and fly but take the purpose of life with all required sincerity ? As an introduction to togetherness in living, living with limited comforts but with Happiness and simplicity, our Association is hosting the 27th Utsav of the tiny Tots of Karnataka.

I have pleasure to head the like minded, dedicated warm people with unity of mind, thought and action always persevering the pursuit of excellence in the District Association.

I have pride in the Editorial Committee headed by Editor in Chief who together with the team incessantly thinks about the upgradation and upkeeping of moral values in personal and social life.

I have treasure of confidence in the District Administration very ably lead by indomitable but unassuming Deputy Commissioner Sri K. R. Srinivas who also heads our District Association as the President.

When there is unity of thought and action, the uninterrupted flow of enthusiasm and the path that is being tread is in the direction of appropriate destination - where else can an event lead to - than to the culmination at success.

Come, let us walk together in the pursuit of excellence

Through learning - growing and experiencing - eternally

**B. R. Sachidanand**
District Chief Commissioner

# The Bharath Scouts and Guide Karnataka
## Chikmagalur District.

## State level 27th Cubs and Bul-Buls Utsav Chikmagalur.

**Date 3rd to 7th November 2003**
**at Subash Chandrabose Play Ground, Chikmagalur- 577 101**

**VARIOUS COMMITTEES :**

**Chief Patron :**

**Sri B. L. Shankar,**
speaker, Karnataka Vidhana Parishath

**Patrons :**

**Sri D. B. Chandre Gowda,**
Hon'ble Minister for Law and Parliamentry Affairs.

**Sri C. R. Sageer Ahmed,**
Hon'ble Minister for Hosing.

**Smt. Motamma,**
Hon'ble Minister for Woman and Child Welfare.

**Sri D. H. Shankar Murthy,**
Leader of Opposition Leg-Council.

**Sri D. C. Srikantappa,**
Member of Parliament.

**Vice-Patrons:**

**Sri K. M. Krishna Murthy,** MLA, Kadur.

**Sri B. R. Neelakantappa,** MLA, Tharikere,

**Sri K. B. Mallikarjuna,** MLA, Birur.

**Sri S. V. Manjunatha,** MLC.

**Sri Balakrishna Bhat,** MLC.

**ORGANISNG COMMITEE:**

**Chairman :**

**Sri K. R. Srinivas,** IAS.,
Deputy Commissioner and President,
Bharat Scouts and Guides, Chikmagalur.

**Co-chairman :**

**Sri Shantharaju**
Chief Executive Officer, Zilla Panchayath.

**Sri B. K. Singh,** I.P.S.,
Superintendent of Police, Chikmagalur.

**Convener:**

**Sri M. Chandrashekariah,**
Deputy Director of Public Instructions,
and Vice-President of Bharat Scouts and Guides.
Chikmagalur.

**Utsav Chief :**

**Sri Kondajji B. Shanmukhappa,**
State Chief Commissioner,
Bharat scouts and Guides, Karnataka.

**Utsav Deputy Chief :**

**Sri C. R. Md. Zaheruddhin,**
State Commissioner (Scout)

**Smt. M. G. Bopaiah**
State Commissioner (Guide)

**Utsav Secretary :**

**Sri Chinnaswamy Reddy,** Joint State Secretary.
**Sri Shivamahadevan,** Joint State Secretary
**Smt. Shanthimathi. (G),** Joint State Secretary.

**Utsav Action Commitee Chief :**
**Sri B. R. Sachidanand,**
District Chief Commissioner,
Bharat Scouts and Guides, Chikmagalur.

**Deputy Chief :**
**Sri M. N. Shadakshari, ALT(S)**
District Commissioner (Scouts)

**Smt. Sudha Rajshekar**
Dist. Commissioner (Guide)

Secretary : Sri D. V. Girish,
Joint Secretary : Sri U. S. Prakash
Smt. T. S. Vasanthi
Treasurer : Sri M. C. Murthy,
Members : Smt. Snadhya Rani, ALT(C)&DTC(S)
Sister Cinthia, LT(G)&KTC(G)
Smt. Shakunthala T. K., ADC(G) Principal, TMS.
Sri. C. H. Prasanna, ADC(S)
Sri. Neelakantachar,
Sri. C. E. Manjunatha,
Sri. Shanmukha Sundaram,
Sri. Kiran,
Sri. Ramesh, Principal, ITI.
Co-ordinator : Sri L.T. Lokesh, Asoc.,

**RECEPTION COMMITEE :**

**Chairman :**
Sri A. N. Mahesh,
President, Zilla Panchayat, Chikmagalur.
Sri. M.C. Shekar, Former DC(S)
Sri. A.M. Nanjunda Swamy, Former DC(S)
Smt. Sridevi, Former DC(G)
Smt. Clement M. Pinto, Former DC(S)
Sri. Pathre C. Sdashivan,
Hon'ble President, B. S&G, LA. Birur,

**SOUVENIOR COMMITEE :**

**Chairman :**
Sri. C. Suresh,
President, Zilla Pathrakarthara Sanga.

**Convener :**
Sri M. A. Challaiah,
Headquarters Commisioner (P-R)
Bharath Scouts and Guides, Karnataka.

**Chief Editor :**
Sri S. Girijashankar, Editor, Janamitra.

**Editors :**
Sri K. Onkarappa
Sri Belavadi Manjunath,

**Co-Ordinator :**
Sri Neelakantachar, Secretary,
Bharat Scouts and Guides,LA, Chikmagalur.

**FINANCE COMMITEE :**

**Chairman :**
Sri M.L. Murthy,
EX-Chairman, CDA. Chikmagalur.

**Convener :**
Sri Prabhakar,
Headquarters Assistant, DC office, Chikmagalur.

**Vice-Chairman :**
Sri Harikumar Jha,
Deputy Conservator of Forest. Chikmagalur.

**Members:**
Sri D.H. Nataraj, Waterjet Engineers,
Sri H.R. Lakshmana Gowda, Coffee Planter,
Sri T. D. Raje Gowda, Ex-president, ZP
Sri B. N. Vishwanath,
Sri. M. Surya Narayanappa, State Tresurer.
Sri Arekal S. Chandrashekar, President, B. S. & G.,LA., Biru
Sri Halekote S. Ramesh, President, B.S. & G. LA. Mudigere
Sri Vasantha Ajila, president, B. S &G, LA. Koppa,
Smt Sujatha K. M. Krishna Murthy, President B. S&G, LA, Kadu
Sri. A. Laksman Das, ALT(S) Sringeri.
Sri. L.V. Basavaraj, President, B.S&G.LA,&President City Muncipality, Chikmagalu
President Timber Merchant Association.
President Bank officers, Association.
President B.S.G. LA, Tarikere,

## ACCOMMODATION COMMITTEE:

**Chairman :**
Sri Sanna Thammegowda,
President Zilla Vokkaligara Snagha, Chikmagalur.

**Vice-Chairman :**
Smt. T. K. Shakunthala,Principal, T. M. S.& ADC(G) Chikmagalur.

**Convener :**
Executive Engineer, ZP, Chikmagalur

**Members :**
Sri Uddappa,
President, Taluk Panchayat, Chikmagalur
Smt. Vishala Shadakshari,
ADC(G) &Head Mistress, M. E. High School, Chikmagalur
Sister Mary,
Head Mistress, St, Joseph Girls High School, Chikmagalur.
Sri L. V. Venugopal,
Manager, Police Training Institute, Chikmagalur.
Sri Nissar Pasha, Mountain View School.

**Co-Ordinators :**
Sri B. N. Kiran & Smt Supriya.

## WATER SUPPLY AND SANITATION COMMITTEE:

**Chairman :**
Sri L. V. Basavaraj,
President, City Municipality.

**Convener :**
Sri Uday Shankar,
City Muncipal Commissioner, Chikmagalur.

**Co-Ordinators :**
Sri Ramesh, ITI, Principal.
Sri M. S. Jeeva

## HEALTH & MEDICAL SERVICE COMMITTEE:

**Chairman :**
Sri Subramanya, President, Sthai Samithi, ZP.

**Convener :**
Dr. Bhagya Lakshmi.

**Members :**
Dr. Shiva Kumar,
Dr. Sundar K.
Dr. J. P. Krishne Gowda, President, IMA.

**Co-Ordinators :**
Dr. M. S. Ashwini

## FOOD COMMITTEE

**Chairman :**
Sri. C. T. Ravi, State Secretary, BJP Yuva Morcha

**Convener :**
Sri. Sridhar, Director,Food and Civil Supplies, Chikmagalur.

**Co-Ordinator :**
Sri M. C. Murthy, District Treasurer, & ADC(S)

**Members :**
Smt. Kathyayani Chandrashekar,
Smt. Sathy prema Manjunatha Gowda,
Smt. Sudha Rajshekar, DC(G)
Sri. Mallikarjuna Karkepete.
Sri. Maheshwarappa Kalasapura
President, APMC. Varthakara Sangha,
Sri S. K. Shivaiah, Supt, TMS, Chikmagalur

## PROGRAMME COMMITTEE :

**Chairman :**
Sri Narayana Shetty,State Organising Commissioner(S)
Smt. Janaki Venugopal.State Organising Commissioner(G)

**Convener :**
Sri M. N. Shadakshari,District Commissioner(S) Chikmagalur.

## ARENA & STAGE DECORATION COMMITTEE:

**Chairman :**
Smt Uma I. B. Shankar,

**Co-Chairman :**
Smt. Radha Sundaresh,

**Members :**
Sri Siddaramappa,District youth Servicers & Sports Officer.
Sri. Manjunatha Kamath,
Executive Engineer MES COM.
District Contractors Association.

**Co-ordinator :**
Sri. C.E. Manjunath, HWB,
Scout Master, Mountain View High School, Chikmagalur

## PUBLICITY AND PUBLIC RELATION COMMITTEE:

**Chairman :**
Sri S. L. Bojegowda, ADC(S) & Advocate, Chikmagalur.

**Convener :**
Sri Narasimha Murthy D.Publicity Officer, Vartha Bhavan,

**Co-Ordinator :**
Sri C. H. Prasanna, Asst. District Commissioner(S)

**Member :**
Sri Dinesh Patavardhan, Udaya T. V. Chikmagalur.
Sri M. A. Challaiah, H.Q.C(PR)
Rajya Doordharshan Reporters,
Cable TV Association, Chikmagalur.

## TRANSPORT AND LOCAL SIGHT SEEING COMMITTEE:

**Chairman :**
Sri E. S. Uddappa, President, Taluk Panchayat, Chikmagalur

**Convener :**
Sri C. Narayana Swamy, Regional Transport officer, Chikmagalur

**Co-Ordinator :**
Sri Shanmukha Sundarm, RSL.

## SCHOOL MANAGEMENTS

Mountain View High School, Ckm.
Model English High School, Uppalli,
Maharshi Vidhya Mandira, CKM.
Bus Owners Association, CKM.
Sri Sudesh, Mallikarjuna Transports,
Principal, AIT, CKM.
President, Lorry Owners Association.

## LOCAL TALENT SHOW COMMITTEE:

**Chairman :**
Sri MadeGowda, Deputy Director Kan. &Culture Dept,
Sri Doddamallappa, EO, DDPI, Office, CKM.

**Co-Ordinator :**
Smt. C. Sandya Rani, DTC(S) ALT(C)

**Members :**
Smt. Jammeela Khanum, ADC(G)
Smt. T. S. Vasanthi.
Smt Rizwana Parveez.
Smt Jaya Lakshmi
Miss. Amjeeda Naz
Miss. Vijayalakshmi
Sri B. T. Basavaraj.
Heral Parveen Pinto
Yamini savur & Anil Savur.

## ADVENTURE ACTIVITY COMMITTEE

**Chairman :**
Sri Puttananjaiah, District Physical Education Superintendent. CKM

**Co-Ordinator :**
Sri U. S. Prakash, Dist, Jt. Secretary,

**Convener :**
Sri Srinivas, State Executive Committee Member.

**Member :**
Sri HonneGowda, HWB (S), Scouter.
Sri. Shivanna, HWB (S), Scouter
Sri. Siddappa, HWB (S), Scouter,



# ಭಾರತ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

## ರಾಜ್ಯ ಮಟ್ಟದ ೨೭ನೆಯ ಕಬ್ ಮತ್ತು ಬುಲ್ ಬುಲ್ ಉತ್ಸವ ೨೦೦೩, ನವೆಂಬರ್ ೩ ರಿಂದ ೭ ರವರೆಗೆ

## ದೈನಂದಿನ ಕಾರ್ಯಕ್ರಮಗಳು

### ೩-೧೧-೨೦೦೩ ನೆಯ ಸೋಮವಾರ

| | | | |
|---|---|---|---|
| ಬೆಳಿಗ್ಗೆ | - | ೧೧-೦೦ | ನೋಂದಣಿ ಮತ್ತು ಬಿಡಾರ |
| ಮಧ್ಯಾಹ್ನ | - | ೧೨-೦೦ | ಕಬ್ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳ ಸಭೆ. |
| | | ೧೨-೩೦ | ಮಧ್ಯಾಹ್ನದ ಊಟ |
| | | ೨-೦೦ | ಧ್ವಜಾರೋಹಣ ಮತ್ತು ಪ್ರಾರ್ಥನೆ |
| | | | ಸಾಮಾನ್ಯ ಮಾಹಿತಿ ನೀಡಿಕೆ ಹಾಗೂ ಉದ್ಘಾಟನಾ ಸಮಾರಂಭಕ್ಕೆ ಪ್ರದರ್ಶನಾಭ್ಯಾಸ |
| ಸಂಜೆ | - | ೩-೦೦ | ಚಹಾ |
| | | ೩-೩೦ | ಉದ್ಘಾಟನಾ ಸಮಾರಂಭಕ್ಕೆ ಸಮಾವೇಶ |
| | | ೪-೦೦ | ಉತ್ಸವದ ಉದ್ಘಾಟನಾ ಸಮಾರಂಭ |
| | | ೬-೦೦ | ಪ್ರತಿಭಾ ಪ್ರದರ್ಶನ - ಸ್ಥಳೀಯ ಶಾಲೆಗಳಿಂದ |
| ರಾತ್ರಿ | - | ೭-೩೦ | ಭೋಜನ |
| | | ೮-೩೦ | ಸಿಬ್ಬಂದಿ ವರ್ಗದ ಸಭೆ ಮತ್ತು ಮಕ್ಕಳು ಶಿಬಿರಗಳಿಗೆ ಮರಳುವುದು,ವಿಶ್ರಾಂತಿ. |
| | | ೯-೩೦ | ದೀಪ ನಂದಿಸುವುದು |

### ೪-೧೧-೨೦೦೩ ನೆಯ ಮಂಗಳವಾರ

| | | | |
|---|---|---|---|
| ಬೆಳಿಗ್ಗೆ | - | ೬-೦೦ | ಏಳುವುದು ಮತ್ತು ತಯಾರಿ |
| | | ೭-೧೫ | ತಪಾಸಣೆ |
| | | ೭-೩೦ | ಪ್ರಾರ್ಥನೆ ಮತ್ತು ಧ್ವಜಾರೋಹಣ |
| | | ೮-೦೦ | ಬೆಳಗಿನ ಉಪಾಹಾರ |
| ಬೆಳಿಗ್ಗೆ ೯.೦೦ ರಿಂದ ಸಂಜೆ ೪-೦೦ ರವರೆಗೆ | | | ಬೇಲೂರು ಹಳೇಬೀಡು ಸಂದರ್ಶನ ಮತ್ತು ಗೆಳೆತನದ ಆಟ |
| ಸಂಜೆ | - | ೪-೩೦ | ಚಹಾ |
| | | ೫-೩೦ | ಕೆಂಪು ಪುಷ್ಪ ಮತ್ತು ಕಲರವ |
| | | | ಶಿಬಿರಾಗ್ನಿ - ಕಬ್ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳಿಂದ. |
| | | ೭-೧೫ | ಹುಲಿವೇಷ ಪ್ರದರ್ಶನ |
| ರಾತ್ರಿ | - | ೮-೦೦ | ಭೋಜನ |
| | | ೯-೦೦ | ಮಕ್ಕಳು ಶಿಬಿರಗಳಿಗೆ ಮರಳುವುದು ಮತ್ತು ವಿಶ್ರಾಂತಿ |
| | | ೯-೩೦ | ದೀಪ ನಂದಿಸುವುದು |

### ೫-೧೧-೨೦೦೩ನೆಯ ಬುಧವಾರ

| | | | |
|---|---|---|---|
| ಬೆಳಿಗ್ಗೆ | - | ೬-೦೦ | ಏಳುವುದು ಮತ್ತು ತಯಾರಿ |
| | | ೭-೧೫ | ತಪಾಸಣೆ |
| | | ೭-೩೦ | ಧ್ವಜಾರೋಹಣ |
| | | ೮-೦೦ | ಬೆಳಗಿನ ಉಪಾಹಾರ |
| | | ೯-೦೦ | ಕರಕುಶಲ ಪ್ರತಿಭಾ ಪ್ರದರ್ಶನ |
| | | | (ಚಿತ್ರಕಲೆ ಮತ್ತಿತರ ಚಟುವಟಿಕೆಗಳು) |

| | | |
|---|---|---|
| ಮಧ್ಯಾಹ್ನ - | ೧೨-೦೦ | ಹುಲಿ ಮುಖವಾಡ ಪ್ರದರ್ಶನ |
| | ೧೨-೩೦ | ಮಧ್ಯಾಹ್ನದ ಊಟ |
| | ೨-೦೦ | ಕಾಡು ಕುಣಿತ ಮತ್ತು ತಾರಾ ಕಥೆಗಳು |
| ಸಂಜೆ - | ೩-೦೦ | ವಸ್ತು ಪ್ರದರ್ಶನ ಉದ್ಘಾಟನೆ |
| | ೩-೩೦ | ಪಥ ಸಂಚಲನ (ನಗರದ ಮುಖ್ಯ ಬೀದಿಗಳಲ್ಲಿ) |
| | ೫-೦೦ | ಚಹಾ |
| | ೫-೦೦ | ಕಬ್ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳ ಸಭೆ |
| | ೫-೩೦ | ಜಾನಪದ ಹಬ್ಬ (ಎಲ್ಲ ಜಿಲ್ಲೆಗಳಿಂದ) |
| | ೭-೦೦ | ಮ್ಯಾಜಿಕ್ ಷೋ (ಜಾದೂ ಪ್ರದರ್ಶನ) |
| | ೮-೦೦ | ಭೋಜನ |
| | ೯-೦೦ | ಮಕ್ಕಳು ಶಿಬಿರಗಳಿಗೆ ಮರಳುವುದು ಮತ್ತು ವಿಶ್ರಾಂತಿ<br>ಸಿಬ್ಬಂದಿ ವರ್ಗದ ಸಭೆ |
| | ೯-೩೦ | ದೀಪ ನಂದಿಸುವುದು |

*೬-೧೧-೨೦೦೩ ನೆಯ ಗುರುವಾರ*

| | | |
|---|---|---|
| ಬೆಳಿಗ್ಗೆ - | ೬-೦೦ | ಏಳುವುದು ಮತ್ತು ತಯಾರಿ |
| | ೭-೧೫ | ತಪಾಸಣೆ |
| | ೭-೩೦ | ಸರ್ವಧರ್ಮ ಪ್ರಾರ್ಥನೆ |
| | ೮-೦೦ | ಧ್ವಜಾರೋಹಣ |
| | ೮-೧೫ | ಬೆಳಗಿನ ಉಪಾಹಾರ |
| ಬೆಳಿಗ್ಗೆ - | ೯-೦೦ | ಸಾಹಸ ಕ್ರೀಡಾಚಟುವಟಿಕೆಗಳು |
| ಮಧ್ಯಾಹ್ನ - | ೧೨-೩೦ | ಊಟ |
| | ೨-೦೦ | ಸಮಾರೋಪ ಸಮಾರಂಭಕ್ಕೆ ಪ್ರದರ್ಶನಭ್ಯಾಸ |
| ಸಂಜೆ - | ೩-೩೦ | ಚಹಾ |
| | ४-೦೦ | ಸಮಾರೋಪ ಸಮಾರಂಭ |
| | ೬-೦೦ | ಮಕ್ಕಳಿಗೆ ಕಥೆ ಹೇಳುವುದು, ಕಬಾ ಮಾಸ್ಟರ್ ಮತ್ತು ಫ್ಲಾಕ್ ಲೀಡರ್‌ಗಳ ಸಭೆ |
| | ೬-೩೦ | ಭವ್ಯ ಶಿಬಿರಾಗ್ನಿ, ಕಬ್ಸ್ ಮತ್ತು ಬುಲ್ ಬುಲ್ಸ್ ಮಕ್ಕಳಿಂದ |
| ರಾತ್ರಿ - | ೮-೦೦ | ಭೋಜನ |
| | ೮-೩೦ | ಸಿಬ್ಬಂದಿ ವರ್ಗದ ಸಭೆ |
| | ೯-೦೦ | ಮಕ್ಕಳು ಶಿಬಿರಗಳಿಗೆ ಮರಳುವುಬು ಮತ್ತು ವಿಶ್ರಾಂತಿ |
| | ೯-೩೦ | ದೀಪ ನಂದಿಸುವುದು. |

*೭-೧೧-೨೦೦೩ ನೆಯ ಶುಕ್ರವಾರ*

| | | |
|---|---|---|
| ಬೆಳಿಗ್ಗೆ - | ೬-೦೦ | ಏಳುವುದು ಮತ್ತು ತಯಾರಿ. |
| | ೭-೩೦ | ಧ್ವಜಾರೋಹಣ |
| | ೮-೦೦ | ಶಿಬಿರದ ಮುಕ್ತಾಯ |
| | ೮-೩೦ | ಬೆಳಗಿನ ಉಪಾಹಾರ |
| | ೯-೦೦ | ನಿರ್ಗಮನ |



# ಉತ್ಸವ ಗೀತೆಗಳು

*ಟಿ. ಎಸ್. ವಾಸಂತಿ*

ಹಾಡುವೆವು ನಲಿದಾಡುವೆವು ಮಲೆ
ನಾಡಿನ ಸಿರಿಕೊಂಡಾಡುವೆವು
ಹಾಡುತ ಕುಣಿಯುತ ಕನ್ನಡ ನಾಡಿನ
ಹಾಡನು ಹೃದಯದಿ ಕೂಡುವೆವು ॥ಪ॥

ಕನ್ನಡ ನಾಡಿನ ಐಸಿರಿಯು ಸಖ-
ರಾಯನ ಮಕ್ಕಳ ಸಂಪದವ
ಚಿಕ್ಕಮಗಳೂರಿನ ವೈಭವ ಈ
ಪ್ರಕೃತಿಯ ಸುಂದರ ಉತ್ಸವವ..... ॥೧॥

ರುಚಿ ರುಚಿ ಪರಿಮಳ ಬೀರುವ ಕಾಫಿ
ಘಮಘಮಿಸುತ್ತಿಹ ಬಿಳಿ ಏಲಕ್ಕಿ ।
ಜಲಪಾತಗಳ ಮಂಗಳ ಕಲರವ
ಪಕ್ಷಿಯ ಚಿಲಿಪಿಲಿ ನಾದೋತ್ಸವವ ॥ ೨॥

ಕಬ್ ಬುಲ್ ಬುಲ್ ಮಕ್ಕಳ ಹರ್ಷವ
ಹೆಬ್ಬೆಯ ಮಾಣಿಕಧಾರಾವರ್ಷವ ।
ತುಂಬಿದ ಹೃದಯದಿ ಶ್ರೀ ಶಾರದೆಯ
ಹೊರನಾಡಿನ ಶ್ರೀ ಅನ್ನಪೂರ್ಣೆಯ...... ॥೩॥

ತುಂಗೆಯ - ಭದ್ರೆಯ ಪಾವನ ನಾಡು
ಬೆಳವಡಿ ಶಿಲ್ಪದ ವಾಸ್ತವಬೀಡು ।
ಸರ್ವಧರ್ಮಗಳ ಶಾಂತಿಯ ನಾಡು
ಸರ್ವರಲೂ ಸೌಹಾರ್ದವನೊಡು..... ॥೪॥

ಹಸಿರೇ ತುಂಬಿದೆ ಮಲೆನಾಡಿನಲೀ
ಹಸಿರೇ ತುಂಬಿದ ಜನಮನಗಳಲೀ
ಹಸಿರಾಗಿರಲೀ ರಾಜ್ಯೋತ್ಸವವು
ಉಸಿರಾಗಲೀ ಉತ್ಸಾಹವು ಎಂದು... ॥೫॥

# ಮರಿಗಳು "ಕಬ್ಬಿಂಗ್" ಅಂದು-ಇಂದು

*ನಾರಾಯಣ ಶೆಟ್ಟಿ*

**ರಾ**ಬರ್ಟ್ ಬೇಡನ್ ಪೊವೆಲ್ಲರು ೧೯೦೮ರಲ್ಲಿ ಲಂಡನ್ನಿನ ಗಾಜಿನ ಅರಮನೆ ( Crystal Palace) ಯಲ್ಲಿ ತಮ್ಮ ಯೋಜನೆ ಹೇಗೆ ರೂಪು ತಳೆಯುತ್ತಿದೆಯೋ ನೋಡಲೆಂದು ಸ್ಕೌಟ್-ಬಾಲಕರ ರ್‍ಯಾಲಿ ಕರೆದಾಗ, ಅವರ ನಿರೀಕ್ಷಣೆಗೂ ಮೀರಿ ಅಪಾರ ಸಂಖ್ಯೆಯಲ್ಲಿ ಬ್ರಿಟನ್ನಿನ ನಾನಾ ಕಡೆಯಿಂದ ಸ್ಕೌಟು ಬಾಲಕರು ಬಂದಿದ್ದರು. ಇಲ್ಲಿ ಅವರಿಗೆ ಕಾದಿದ್ದ ಆಶ್ಚರ್ಯವೆಂದರೆ ಬಾಲಕರ ಒಟ್ಟಿಗೆ ಬಾಲಕಿಯರೂ, ಪುಟಾಣಿ ಹುಡುಗರೂ ಸಹ ತಮ ತಮಗೆ ತೋರಿದ, ದೊರಕಿದ 'ಸ್ಕೌಟ್' ವೇಷ ಧರಿಸಿ ಸಾಕಷ್ಟು ಹೆಚ್ಚು ಸಂಖ್ಯೆಯಲ್ಲಿ ಬಂದು ಬಿಟ್ಟಿದ್ದರು. ತಮ್ಮ ಅಕ್ಕ ಏಗ್ನಿಸರ ಸಹಾಯದಿಂದ ''ಗರ್ಲ್ ಗೈಡಿಂಗ್'' ಚಳವಳಿಯನ್ನು ರೂಪಿಸಿ ಹೆಣ್ಣುಮಕ್ಕಳ ''ಸ್ಕೌಟ್'' ಸಮಸ್ಯೆಯನ್ನು ೧೯೧೨ ರ ವೇಳೆಗೆ ಪರಿಹರಿಸಿಕೊಂಡರು. ಆದರೆ ಆ ಚಿಲ್ಟಾಣಿಗಳ ಸಮಸ್ಯೆ?

ಬಿ. ಪಿ. ಅನೇಕ ತಜ್ಞರೊಡನೆ ಚರ್ಚೆಮಾಡಿದರು, ಗ್ರಂಥಗಳ ವ್ಯಾಸಂಗ ಮಾಡಿದರು. ಮಕ್ಕಳೊಂದಿಗೆ ಪ್ರಯೋಗಗಳನ್ನು ನಡೆಸಿದರು. ಶಿಶುಶಿಕ್ಷಣ ನಿಷ್ಣಾತರಾದ ಮಹಿಳೆಯರ ಸಹಕಾರಪಡೆದರು. ರುಡ್ಯಾರ್ಡ್ ಕ್ಲಿಪ್ಲಿಂಗರ ''ಜಂಗಲ್ ಬುಕ್'' ಕಾಡಿನ ಕತೆಗಳಲ್ಲಿಯ ಮೌಗ್ಲಿ ಕಥೆಗಳನ್ನು ಹಿನ್ನೆಲೆಯಾಗಿ ಮಾಡಿಕೊಂಡು ೮ ರಿಂದ ೧೦ ವಯಸ್ಸಿನ ಬಾಲಕರ ವಯೋಧರ್ಮಕ್ಕೆ, ಮನೋವಿಕಾಸಕ್ಕೆ, ಬುದ್ಧಿ ಆಧ್ಯಾತ್ಮಗಳ ಬೆಳವಣಿಗೆಗೆ ದೇಹಧಾರ್ಢ್ಯಕ್ಕೆ ಅನುಕೂಲವಾದ ಒಂದು ಯೋಜನೆಯನ್ನು ೧೯೧೪ರ ಜನವರಿ ವೇಳೆಗೆ ಸಿದ್ಧಪಡಿಸಿಕೊಂಡರು. ಆಗ ಬಿ. ಪಿ. ಯವರಿಗೆ ತುಂಬಾ ಸಹಾಯಕರಾಗಿದ್ದವರಲ್ಲಿ ಶ್ರೀಮತಿ ವೇರಬಾರ್ಕ್ಲೆ ಒಬ್ಬರು.

೧೯೧೬ರಲ್ಲಿ 'ಮರಿಗಳ ಕೈಪಿಡಿ' (ದಿ ವುಲ್ಫ್ ಕಬ್ಸ್ ಹ್ಯಾಂಡ್ ಬುಕ್) ಪ್ರಕಟಣೆಯೊಂದಿಗೆ ಸ್ಕೌಟ್ ಸಂಸ್ಥೆಯ ಕಿರಿಯ ವಿಭಾಗ ಕಬ್ಬಿಂಗ್ (ಮರಿಗಳ ಶಿಕ್ಷಣ) ವಿದ್ಯುಕ್ತವಾಗಿ ಪ್ರಾರಂಭವಾಯಿತು. ೧೯೧೪ರಲ್ಲಿ ''ರೋಸ್ ಬರ್ಡ್ಸ್ (ಗುಲಾಬಿ ಮೊಗ್ಗುಗಳು) ಅಭಿದಾನದಿಂದ ಗರ್ಲ್ ಗೈಡ್‌ಗಳ ಕಿರಿಯ ವಿಭಾಗವೂ ಆರಂಭವಾಯಿತು.

ಮೌಗ್ಲಿ ಕತೆಗಳ, ವನವಾತಾವರಣವನ್ನು ಕಾಯ್ದುಕೊಳ್ಳುತ್ತ ಈ ವಿಭಾಗಕ್ಕೆ ''ವುಲ್ಫ್ ಕಬ್ಸ್'' ಎಂದು ಹೆಸರಿಟ್ಟರು. ಸ್ಕೌಟಿಂಗ್ ಒಡನೆ ಹರಡಿದ ದೇಶಗಳಲೆಲ್ಲಾ ಈ ''ತೋಳದ ಮರಿಗಳು'' ಕೂಡ ಕಾಣಿಸಿ ಕೊಳ್ಳುತ್ತಾ ಎಳೆತನದಿಂದಲೂ ಮಕ್ಕಳಿಗೆ ವಿಧೇಯತೆ, ಪರೋಪಕಾರ, ಸೋದರಭಾವ, ಆತ್ಮಸಂಯಮ (ನಿಸ್ವಾರ್ಥತೆ) ಮೈಗೂಡಿಸುತ್ತಾ ಬಂದಿತು.

ಭಾರತದಲ್ಲಿಯೂ ಅಲ್ಲಲ್ಲಿ ಮರಿಗಳ ಹಿಂಡುಗಳು ೧೯೧ ರಿಂದ ಕಾಣತೊಡಗಿದವು.

೧೯೧೮ರಲ್ಲಿ ಇಂಡಿಯಾ ಸರ್ಕಾರವೂ ತನ್ನ ಪ್ರಾಂತಗಳಲ್ಲಿಯೂ, ಆಶ್ರಿತ ಸಂಸ್ಥಾನಗಳಲ್ಲಿಯೂ ಸ್ಕೌಟ್ ಚಳುವಳಿಯನ್ನು ಸ್ಥಾಪಿಸಿ ಹರಡತಕ್ಕದು ಎಂಬ ನಿರೂಪವನ್ನು ಹೊರಡಿಸುವ ವೇಳೆಗೆ (ಅಂದಿನ) ಮೈಸೂರು ಸಂಸ್ಥಾನದಲ್ಲಿ ಸಹ ಸ್ಕೌಟಿಂಗ್ ಅಂಕುರವಾಗಿತ್ತು. ಪ್ರವಾಸ ನಿಮಿತ್ತ ಈ ದೇಶಕ್ಕೆ ಅಮೆರಿಕದಿಂದ ಬಂದಿದ್ದು ಬೆಂಗಳೂರು ವೈ. ಎಂ. ಸಿ. ಎ ಮಂದಿರದಲ್ಲಿ ತಂಗಿದ್ದ ಕೆನಡಿಯನ್ ತರುಣ ಫ್ರಾಂಕ್ ಸಿ ಇರ್ವಿನ್ ಅವರನ್ನು ಒಂದು ವರ್ಷ ಕಾಲ 'ಡೈರಕ್ಟರ್' ಎಂದು ಇರಿಸಿ ಕೊಂಡು 'ಮೈಸೂರು ಸ್ಕೌಟ್ಸ್' ಸಂಸ್ಥೆ ಪ್ರಾರಂಭವಾಯಿತು

೧೯೨೧ ರಲ್ಲಿ ಮದರಾಸಿನ ಶ್ರೀ ಸಿ. ಸಂಜೀವ ಕಾಮತರು ಮರಿಗಳ ವಿಭಾಗದ ಸಲಹೆ ಕೊಟ್ಟರು. ೧೯೨೩ರ ವೇಳೆಗೆ ಕಾಮತರಿಗೆ ಸಹಾಯಕರಾಗಿದ್ದ ಶ್ರೀ. ಸಿ. ಸುಬ್ಬರಾಯರು ವ್ಯವಸ್ಥೆಯ ಜವಾಬ್ದಾರಿಯನ್ನು ವಹಿಸಿ ಕೊಂಡರು. ಆ ವರ್ಷ ಮೈಸೂರು ಜಿಲ್ಲೆಯ ಬ್ಯಾಡರ ಹಳ್ಳಿಯಲ್ಲಿ ಸಂಸ್ಥಾನದ ಸ್ಕೌಟರುಗಳ ಸಮ್ಮೇಳನ ಮೊದಲ ಬಾರಿಗೆ ನಡೆಯಿತು. ಅಲ್ಲಿ ನಮ್ಮ ರಾಜ್ಯದಲ್ಲಿಯೂ ಎಳೆಯ ಹುಡುಗರಿಗಾಗಿ 'ಕಬ್ಸ್' ಶಿಕ್ಷಣವನ್ನು, ತರುಣರಿಗಾಗಿ 'ರೋವರ್ಸ್' ಶಿಕ್ಷಣವನ್ನೂ ಪ್ರಾರಂಭಿಸತಕ್ಕದೆಂದು ನಿರ್ಣಯವಾಯಿತು. ಈ ಬಗೆಗೆ ಹೆಚ್ಚಿನ ಪರಿಶ್ರಮ ಪಡೆಯಲು ೧೯೨೪ ಡಿಸೆಂಬರಿನಲ್ಲಿ ಶ್ರೀ ಸಿ. ಸುಬ್ಬರಾಯರು ಚಿಕ್ಕಮಗಳೂರಿನ ಶ್ರೀ ಎಸ್. ವೆಂಕಟರಾಮಯ್ಯನವರು ಮತ್ತು ಸ್ಕೌಟ್ ಕೇಂದ್ರ ಕಛೇರಿಯ ಶ್ರೀ ಎಂ. ಎಚ್. ರಾಮಚಂದ್ರರಾಯರು, ಈ ಮೂವರೂ ಮದರಾಸಿಗೆ ಹೋಗಿ ಮಿ. ಟೈಟ್ಲರರ ನಾಯಕತ್ವದಲ್ಲಿ ಜಸ್ಟಿಸ್ ವೆಂಕಟಸುಬ್ಬಯ್ಯನವರ ಉದ್ಯಾನದಲ್ಲಿ ನಡೆದ ಕಬ್ ಮಾಸ್ಟರರ ಶಿಕ್ಷಣ ಶಿಬಿರದಲ್ಲಿ ಅನುಭವಗಳಿಸಿ ಹಿಂದಿರುಗಿದರು. ೧೯೨೫ರಲ್ಲಿ ಮೈಸೂರು ಚಾಮುಂಡಿ ಬೆಟ್ಟ ಮತ್ತು ಬೆಂಗಳೂರು ಬಳಿಯ ಹೆಸರುಘಟ್ಟಗಳಲ್ಲಿ ಮರಿಗಳಿಗಾಗಿ ಹಿರಿಯರ ಶಿಕ್ಷಣ ಶಿಬಿರಗಳು ನಡೆದು ರಾಜ್ಯದಲ್ಲಿ "ವುಲ್ಫ್ ಕಬ್ಸ್" ವಿದ್ಯುಕ್ತವಾಗಿ ಪ್ರಾರಂಭವಾಯಿತು.

ಸಂಸ್ಥಾನದಲ್ಲಿ ಎಲ್ಲಿ ಸ್ಕೌಟ್ ಟ್ರೂಪ್, ಕಬ್ ಪ್ಯಾಕ್ ಅಥವಾ ರೋವರ್ ಕ್ರ್ಯೂ ಪ್ರಾರಂಭವಾದರೂ ಅವರೆಲ್ಲರ ಹೆಸರುಗಳೂ ಬೆಂಗಳೂರು ಕೇಂದ್ರ ಕಛೇರಿಯಲ್ಲಿ ನೋಂದಾಯಿಸಲ್ಪಟ್ಟು ಒಂದೇ ಪುಸ್ತಕದಲ್ಲಿ ಕ್ರಮಾಂಕ ಸಿಗುತ್ತಿದ್ದು ಪ್ರತಿಯೊಬ್ಬರಿಗೂ ಅವರ ವಿಭಾಗಕ್ಕೆ ಅನುಗುಣವಾಗಿ (ಸ್ಕೌಟ್) ಹೆಸರು, (ಕಬ್) ಹಳದಿ ಅಥವಾ ರೋವರ್ (ಕೆಂಪು) ವೈಯಕ್ತಿಕ ಪ್ರಗತಿ ಪತ್ರಿಕೆ. (ಇಂಡಿವಿಜುವಲ್ ಪ್ರೋಗ್ರೆಸ್ ಕಾರ್ಡ್) ದೊರೆಯುತ್ತಿದ್ದಿತು.

ಆದಿಯ ಆ ದಿನಗಳಲ್ಲಿ ಕಬ್ಸ್ ಶಿಕ್ಷಣದಲ್ಲಿ ಮುನ್ನುಗ್ಗಿ, ವಿಚಾರಶೀಲರಾಗಿ, ಇತರರಿಗೂ ವಿಷಯ ಧಾರೆಯೆರೆಯುತ್ತಿದ್ದವರಲ್ಲಿ ಕೆಲವರೆಂದರೆ ಶ್ರೀಯುತರಾದ ವಿ. ಎಸ್. ರಾಮಚಂದ್ರರಾವ್, ಕಶ್ಯಪ್, ಹೆಚ್. ಆರ್. ಅಬ್ದುಲ್‌ಗಫಾರ್, ಸಿ. ಶೇಷಾಚಾರ್, ಬಿ. ಟಿ. ಚಾರ್, ಎಸ್. ಭೈರಪ್ಪ, ಬಿ. ಎನ್. ನಾರಾಯಣರಾವ್, ಎ. ವಾಸುದೇವರಾವ್, ಆರ್. ಕೆ. ಲಕ್ಕೂರ್ ಮುಂತಾದವರು ಕೋಟೆ ಹೈಸ್ಕೂಲ್ ವ್ಯಾಯಾಮ ಅಧ್ಯಾಪಕರಾಗಿದ್ದ ಶ್ರೀ ಅಬ್ದುಲ್ ರಜಾಕ್ ಅವರು ಸುಬ್ಬರಾಯರ ಮಾರ್ಗದರ್ಶನದಂತೆ ವ್ಯಾಯಾಮಗಳನ್ನು ಕಬ್ಬಿಂಗ್‌ಗೆ ಹೊಂದುವಂತೆ ಚಮತ್ಕಾರದಿಂದ ಅಳವಡಿಸಿ ಶ್ರೀ ರಾಯ್‌ರೊಂದಿಗೆ ಶಿಕ್ಷಣ ಶಿಬಿರಗಳಿಗೆ ಬಂದು ತರಬೇತಿ ಕೊಡುತ್ತಿದ್ದರು.

೧೯೧೮ರಲ್ಲಿ ಜನಿಸಿದ ರಾಜಕುಮಾರ ಶ್ರೀ ಜಯಚಾಮರಾಜ ಒಡೆಯರ ೯ನೇ ವರ್ಷದಲ್ಲಿ (೧೯೨೭) ಅವರ ತೀರ್ಥರೂಪರೂ, ರಾಜ್ಯದ ಪ್ರಧಾನ ಸ್ಕೌಟ್ ಆಗಿದ್ದ ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಂದ ದೀಕ್ಷಾಸ್ವೀಕಾರ ನಡೆದು ಕುಮಾರರು ಸಂಸ್ಥಾನದ 'ಪ್ರಧಾನ ಕಬ್' ಆದರು. ಸಂಸ್ಥಾನದ ಎಲ್ಲೆಡೆಯೂ ಈ ಸಮಾರಂಭದ ಸಮಾಚಾರ ಹರಡಿ ಮರಿಗಳ ಶಿಕ್ಷಣಕ್ಕೆ ಅಪಾರ ಪ್ರೋತ್ಸಾಹ ಲಭಿಸಿತು.

ಮೈಸೂರು ಅರಸು ಮಕ್ಕಳ ಶಾಲೆಯಲ್ಲಿ ಅಧ್ಯಾಪಕರಾಗಿದ್ದು 'ವಸಂತ ವಿಹಾರ' ಅರಮನೆಯಲ್ಲಿ ರಾಜಕುಮಾರ ಜಯಚಾಮರಾಜ ಒಡೆಯರಿಗೆ ಬೋಧಕರಾಗಿದ್ದ ಶ್ರೀ ಆರ್. ಕೆ. ಲಕ್ಕೂರರು ಪ್ರೊ. ಎನ್. ಎಸ್. ನಾರಾಯಣಶಾಸ್ತ್ರಿಗಳವರ ಸಹಾಯದಿಂದ ಕೇಂದ್ರ ಕಚೇರಿಯವರು ಪ್ರಕಟಿಸುತ್ತಿದ್ದ "ದಿ ಮೈಸೂರು ಸ್ಕೌಟ್" ಪತ್ರಿಕೆಗೆ ಸಹ ಪತ್ರಿಕೆಯಾಗಿ "ಮೈಸೂರು ಮಕ್ಕಳು" ಎಂಬ ಕನ್ನಡ ಮಾಸ ಪತ್ರಿಕೆಯನ್ನು ಮರಿಗಳ ವಿಶೇಷ ಉಪಯೋಗಕ್ಕೆಂದೇ ಮೈಸೂರಿನಿಂದ ಅಧಿಕೃತ ಪತ್ರಿಕೆಯಾಗಿ ಸಂಪಾದಿಸಿ ಪ್ರಕಟಿಸುತ್ತಿದ್ದರು. ಇದು ತುಂಬ ಸಹಾಯಕವೂ, ಜನಪ್ರಿಯವೂ ಆಗಿದ್ದು ಅನೇಕ ತರುಣ ಬರಹಗಾರರಿಗೆ ಸ್ಫೂರ್ತಿ, ಸಹಾಯಗಳನ್ನು ನೀಡುತ್ತಿದ್ದಿತು.

೧೯೨೮ರಲ್ಲಿ ಕೋಲಾರ ಜಿಲ್ಲಾ ಬೋರ್ಡ್ ಸಹಕಾರದಿಂದ ಮುಳಬಾಗಿಲು ಬಳಿ ಶ್ರೀಪಾದರಾಜರ ವೃಂದಾವನವಿರುವ ನರಸಿಂಹ ತೀರ್ಥದ ಬಳಿ ರಾಜ್ಯಮಟ್ಟದ ಕಬ್‌ಮಾಸ್ಟರ್ ಶಿಕ್ಷಣ ಶಿಬಿರವನ್ನು ಸಿ. ಸುಬ್ಬರಾಯರು ನಡೆಸಿದರು. ಅಲ್ಲಿ 'ವುಲ್ಫ್‌ಕಬ್ಸ್' (ತೋಳದ ಮರಿಗಳು) ಹೆಸರು, ಮರಿಗಳ ಶಿಕ್ಷಣ ವಿಧಾನ, ಈ ವಿಭಾಗಕ್ಕೆ ಹೊಂದುವ ಹಾಡು, ಹರ್ಷನಾದ, ಆಟ, ವ್ಯಾಯಾಮ ಮುಂತಾದ ಬಗೆಗೆ ವಿಪುಲವಾದ ಚರ್ಚೆಗಳಾಗಿ ವಿಚಾರ ಮಥನಾನಂತರ 'ಕನ್ನಡದಲ್ಲಿ ಮರಿಗಳು' ಎಂಬ ಪದವನ್ನು ಬಳಸಬಹುದೆಂದು ತೀರ್ಮಾನವಾಯಿತು. ಅಲ್ಲಿ ಶಿಕ್ಷಣಾರ್ಥಿಗಳಾಗಿ ಬಂದಿದ್ದ

'ಕವಿಕಿಂಕರ' ಶ್ರೀ ವೈ. ಎಸ್. ಗುಂಡಪ್ಪನವರು 'ತೋಳರಾಯನ ಸಭೆ' ರೂಪಕವನ್ನು ಸರಳರಗಳೆಯಲ್ಲಿ ರಚಿಸಲು, ಅದು ಮೊದಲಿಗೆ 'ಮೈಸೂರು ಮಕ್ಕಳು' ಪತ್ರಿಕೆಯಲ್ಲಿ ಪ್ರಕಟವಾಗಿ ಬಳಿಕ ಸಣ್ಣ ಪುಸ್ತಕವಾಗಿ ಅಚ್ಚಾಯಿತು. ಕಬ್ ಮಾಸ್ಟರುಗಳು ಅನೇಕ ಕಡೆ ಉತ್ತಮ ಚುಟುಕ, ಪದ್ಯ, ಕವಿತೆ, ಕತೆ, ಹರ್ಷನಾದಗಳನ್ನು ರಚಿಸಿ ತುಂಬ ಉಪಕಾರ ಮಾಡಿದರು. ಚೀಫ್ ಕಬ್ ಜಯಚಾಮರಾಜ ಒಡೆಯರು ಇಂಗ್ಲಿಷ್ ಮತ್ತು ಕನ್ನಡದಲ್ಲಿ ತಾವೇ ಶುಭಾಶಯಗಳನ್ನು ಬರೆದು ತಮ್ಮ ಸಹಿಯೊಂದಿಗೆ ಪ್ರತಿ ಮರಿಗೂ ತಾವು ಸಮವಸ್ತ್ರದಲ್ಲಿರುವ ಭಾವಚಿತ್ರದ ಕಾರ್ಡ್‌ನಲ್ಲಿ ತದ್ರೂಪ (Facsimile) ಅಚ್ಚು ಮಾಡಿಸಿ ರಾಜ್ಯದಲ್ಲೆಲ್ಲಾ ಹಂಚಿದರು. ಅನೇಕ ಕಡೆ ಇದೇ ಒಂದು ವಿಶೇಷ ಸಮಾರಂಭವಾಯಿತು.

೧೯೩೨ರಲ್ಲಿ ಶ್ರೀ ಕಶ್ಯಪರು ತುಂಬ ಶ್ರಮವಹಿಸಿ ತಮ್ಮ 'ಮರಿಗಳ ಕೂಗು' ಪ್ರಕಟಿಸಿ, ಶ್ರೀಮನ್ಮಹಾರಾಜರಿಗೆ ಸಮರ್ಪಿಸಿದರು. ಸುಪ್ರಿತರಾದ ಪ್ರಭುಗಳು ಶ್ರೀ ಕಶ್ಯಪರನ್ನು ಮೈಸೂರಿನ ಆರಮನೆಗೆ ಬರಮಾಡಿಕೊಂಡು ಸನ್ಮಾನ ನೀಡಿದರು. ೧೯೩೬ರಲ್ಲಿ ಈ ಪುಸ್ತಕ ಎರಡನೆಯ ಆವೃತ್ತಿ ಪ್ರಕಟವಾಯಿತು. ಕೋಲಾರ ಜಿಲ್ಲಾ ಸ್ಕೌಟ್ ಕ. ಶ್ರೀ ಟಿ. ರಾಮಾಚಾರ್ಯರ ಪ್ರೋತ್ಸಾಹದಿಂದ ಶ್ರೀ ಕಶ್ಯಪರು 'ಆಟದ ಬಯಲು' ಸಹ ಪ್ರಕಟಿಸಿದರು.

೧೯೩೪ರಲ್ಲಿ ಗಿಲ್‌ವೆಲ್ ಶಿಬಿರ ಪ್ರಧಾನರಾಗಿದ್ದ ಕರ್ನಲ್ ವಿಲ್ಸನ್ನರು ಮಧ್ಯಪ್ರಾಂತ್ಯದ ಪಚ್‌ಮಾರ್ಹಿಯಲ್ಲಿ ಅಖಿಲಭಾರತ ಸ್ಕೌಟ್, ಕಬ್ ಮತ್ತು ರೋವರ್ ಶಿಕ್ಷಣ ಶಿಬಿರಗಳನ್ನು ನಡೆಸಿದರು. ಕಬ್ ಶಿಕ್ಷಣಕ್ಕಾಗಿ ಸಂಸ್ಥಾನದಿಂದ ಹಾಸನದ ಶ್ರೀ ಎಸ್. ವಿ. ಪಟ್ಟಾಭಿ, ಕೋಲಾರದ ಶ್ರೀ ಎಂ. ವೆಂಕಟಕೃಷ್ಣಪ್ಪ, ಮೈಸೂರಿನ ಬಿ. ಕೃಷ್ಣಮೂರ್ತಿ ಮತ್ತು ನಂಜುಂಡರಾಜೇ ಅರಸು ಪಚಮಾರ್ಹಿಗೆ ಹೋಗಿ ಬಂದರು. ಶ್ರೀ ಎ. ಎನ್. ರಾಮರಾಯರು, ಚಿಕ್ಕಮಗಳೂರಿನ ಎನ್. ರಾಮಸ್ವಾಮಿ ಮುಂತಾದವರು ಬೊಂಬಾಯಿನಲ್ಲಿ ಶಿಕ್ಷಣ ಪಡೆದಬಂದರು.

ಈ ಮಧ್ಯೆ 'ತೋಳದ ಮರಿಗಳು' ಎಂಬ ಹೆಸರು ನಮ್ಮ ಸಂಸ್ಕೃತಿಗೆ ಹೊಂದುವುದಿಲ್ಲವೆಂದು ಕೆಲವರು ವಾದಿಸಿ ಸಂಸ್ಥಾನದಲ್ಲಿ 'ತೋಳ' ಶಬ್ದಕ್ಕೆ ಬದಲು 'ಸಿಂಹ' ಪದವು ಜಾರಿಗೆ ಬಂತು. ಪದಕಗಳಲ್ಲಿಯೂ, ಲಾಂಛನದಲ್ಲಿಯೂ ಹಾಡು ಹರ್ಷನಾದಗಳಲ್ಲಿಯೂ 'ಸಿಂಹದಮರಿಗಳು' (ಲಯನ್‌ಕಬ್ಸ್) ಮಾರ್ಪಾಟಾಯಿತು, 'ನೀವುಗಳೆಲ್ಲಾ ಯಾರಯ್ಯಾ? ಎಂದರೆ 'ಸಿಂಹದ ಮರಿಗಳು ನಾವಯ್ಯಾ' ಎಂದು ಮಕ್ಕಳೇನೋ ಕೂಗುತ್ತಿದ್ದರು. ಮೌಗ್ಲಿಕತೆಗೆ ಬದಲು ಆ ರೀತಿ ಹೊಂದಿಕೊಳ್ಳುವ ಬೇರೆ ಕತೆಗಳೂ ಸಿಕ್ಕಲಿಲ್ಲ. ಪರೀಕ್ಷೆಗಳಲ್ಲಿ, ಆಟ, ಪಾಟ, ನೀತಿ ನಿಯಮ ಧೋರಣೆಗಳಲ್ಲಿಯೂ ಏನನ್ನೂ ಬದಲಾಯಿಸಲೂ ಆಗಲಿಲ್ಲ. ಕೆಲವು ವರ್ಷಗಳ ನಂತರ ಮತ್ತೆ 'ತೋಳದ ಮರಿಗಳೇ ಹಿಂದಿರುಗಿದವು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ರೂಪಿತವಾದ ೧೯೫೦ರಿಂದ ಅಲ್ಲಿಯವರಿಗೆ ಮರಿಗಳ ಸೂಚಕವಾಗಿದ್ದ ಹಳದಿ ಬಣ್ಣಕ್ಕೆ ಬದಲಾಗಿ ನೀಲಿ (ನಡತೆ-ಚಾರಿತ್ರ್ಯ ದ್ಯೋತಕ) ಬಣ್ಣವು ಜಾರಿಗೆ ಬಂದಿತು. ಮರಿಗಳ ಪದಕದ ಹಿನ್ನೆಲೆ, ಕಬ್ ಮಾಸ್ಟರ್ ಪದಕಗಳು, ತಾರೆಯ ಹಿನ್ನೆಲೆ, ಷಟ್ಕನಾಯಕರ ತೋಳ ಬಂದಿಗಳು, ಮರಿಯ ಕಾಲು ಚೀಲಕ್ಕೆ ಬಿಗಿಯುವ (ಗಾರ್ಟರ್ ಟ್ಯಾಬ್) ದಾರಪಟ್ಟಿ ಪ್ರವೀಣತಾ ಪದಕಗಳಲ್ಲಿ ಶೀಲವರ್ಧಕ ಪದಕಗಳಹಿನ್ನೆಲೆ ಕಬ್‌ಮಾಸ್ಟರ್ ಭುಜ ಪಟ್ಟಿಕೆ, ಇವೆಲ್ಲಾ ನೀಲಿ ಬಣ್ಣದಲ್ಲಿರುವುದನ್ನು ಈಗ ಕಾಣಬಹುದು. ಹಿಂದೆ ಇವೆಲ್ಲಾ ಹಳದಿ ಬಣ್ಣವಾಗಿದ್ದುವು. ಕಬ್ ಡೆಪ್ಯುಟಿ ಕ್ಯಾಂಪ್ ಚೀಫ್ (ಡಿ.ಸಿ.ಸಿ.) ಶಿಬಿರ ಶಿಕ್ಷಣಕ್ಕಾಗಿ ಸರ್ವ ಶ್ರೀ ರಾಜ್ಯ ಸಂಘಟನಾ ಕ. ಎಚ್. ಆರ್. ಅಬ್ದುಲ್‌ಗಫಾರ್ ತುಮಕೂರು, ನ್ಯಾಯವಾದಿ ದೊಡ್ಡಬಳ್ಳಾಪುರ ಶಿಬಿರದ ವಾರ್ಡನ್ ಶ್ರೀ ಎಸ್. ಭೈರಪ್ಪ ಮತ್ತು ಹವಾಮಾನ ಇಲಾಖೆಯ ಶ್ರೀ ಸಿ. ಶೇಷಾಚಾರ್ಯರು ಹೋಗಿ ಬಂದರು.

ಶ್ರೀ ಗಫಾರರು ಕೆಲಕಾಲ ಮರಿಗಳಿಗೂ ಸ್ಕೌಟುಗಳಿಗೂ ಸಹಾಯ ವಾಗುವಂತೆ 'ಮೈಸೂರು ಸ್ಕೌಟ್' ಪತ್ರಿಕೆಗೆ ಅನುಬಂಧವಾಗಿ ಕೆಲವು ಹಾಳೆ ಉರ್ದು ಪತ್ರಿಕೆಯನ್ನು ಹೊರಡಿಸುತ್ತಿದ್ದು ಅವು ಎಲ್ಲ ಉರ್ದು ಹಿಂಡುಗಳಿಗೂ ಮುಫತ್ತಾಗಿ ದೊರೆಯುತ್ತಿದ್ದವು.

ಈ ಶತಮಾನದ ನಾಲ್ಕನೆಯ ದಶಕದಲ್ಲಿ ಬೆಂಗಳೂರು ನಗರದ ಕಬ್ ಮಾಸ್ಟರ್ ಶ್ರೀ ವೈ. ಜಿ. ಶಾಂತರಾಜಯ್ಯನವರಿಗೆ ಅವರ ಕವಿತೆಗಳಿಂದಲೂ, ಹಿಂಡುಗಳನ್ನು ನಡೆಸುವುದರಿಂದಲೂ, ಮರಿಗಳಿಗೆ ಸಲ್ಲಿಸಿದ ಉತ್ತಮ ಸೇವೆಯನ್ನು ಪುರಸ್ಕರಿಸಿ ನವರಾತ್ರಿಯ ವೇಳೆ ಶ್ರೀಮನ್ಮಹಾಜರು ಸ್ಕೌಟ್‌ಸೇವಾ ಸುವರ್ಣ ಪದಕವನ್ನು ಶಾಲು ಸಹಿತ ನೀಡಿ ಸನ್ಮಾನಿಸಿದರು. ಸ್ಕೌಟರುಗಳಲ್ಲಿ ಈ ಪುರಸ್ಕಾರವು ಪ್ರಾಪ್ತಿಯಾಗಿರುವುದು ಕರ್ನಾಟಕದಲ್ಲಿ ಇವರೊಬ್ಬರಿಗೇ ಎಂದು ತಿಳಿದಾಗ ಶ್ರೀಯುತರ ಬಗೆಗೆ ನಮ್ಮ ಅಭಿಮಾನ ಆನಂದಗಳು ಇಮ್ಮಡಿಯಾಗುವವು.

೧೯೩೭ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರದ ಕಬ್ ಪ್ಯಾಕ್‌ಗಳಲ್ಲಿ ಅತ್ಯುತ್ತಮವಾದುದಕ್ಕೆ ಒಂದೊಂದು ''ಶ್ರೀ ಜಯಚಾಮರಾಜ ಬೆಳ್ಳಿಯ ಗದೆ'' ಯೂ ಸಂಸ್ಥಾನದ ಪ್ರಥಮ ಚೀಫ್ ಸ್ಕೌಟ್‌ಕಮೀಷನರ್ ಆಗಿದ್ದ ನ್ಯಾಯಮೂರ್ತಿ ರಾಜ ಧರ್ಮ ಪ್ರಸಕ್ತ ಶ್ರೀ ಕೆ. ಶಂಕರನಾರಾಯಣರಾಯರ ನಿಧನಾ ನಂತರ ಅವರ ಸ್ಮರಣೆಗಾಗಿ ಅಂದಿನ ಮೈಸೂರು ಸಂಸ್ಥಾನದ ೯ ಜಿಲ್ಲೆಗಳ ಅತ್ಯುತಮ ಮರಿಗಳ ಹಿಂಡಿಗೆ ಒಂದೊಂದರಂತೆ ೯ ''ಶ್ರೀಶಂಕರನಾರಾಯಣರಾಯರ ಟೋಟೆಂಪೋಲ್'' ಮತ್ತು ದಾನಿಗಳೊಬ್ಬರು ನೀಡಿದ ಸಂಸ್ಥಾನದಲ್ಲೇ ಅತ್ಯುತ್ತಮ ಹಿಂಡಿಗೆ ಲಭಿಸತಕ್ಕ ''ಅಂಬುಜಮ್ಮ ಗುರಾಣಿ'' ಯು ಪರ್ಯಾಯ ಪಾರಿತೋಷಕ (ರೋಲಿಂಗ್ ಟ್ರೋಪಿಗಳಾಗಿ) ಇದ್ದವು.

ಈ ಸುಮಾರಿಗೆ ಮದ್ರಾಸಿನಿಂದ ಬೆಂಗಳೂರಿಗೆ ಬಂದು ನಮ್ಮವರೇ ಹಾಗಿ ನೆಲಸಿರುವ ಶ್ರೀ ಕೆ. ಕಾಶಿನಾಥ ಅವರಿಂದ ( ಈಗಲೂ ಇರುವ ಕಬ್ ಹೆಡ್ ಕ್ವಾ. ಕಮಿಷನರ್) ರಾಜ್ಯಾದ್ಯಂತ ಮಾತ್ರವಲ್ಲ ರಾಷ್ಟ್ರಾದ್ಯಂತವೂ ಮರಿಗಳ ವಿಭಾಗದಲ್ಲಿ ವಿಶೇಷವಾಗಿ ಸೇವೆಸಲ್ಲಿಸುತ್ತಿದ್ದಾರೆ. ಸ. ಸ್ಕೌಟ್ ಕ. ಜಿಲ್ಲಾ ಕಾರ್ಯದರ್ಶಿ, ಗ್ರಂಥಕರ್ತ, ಗ್ರಂಥಗಳ-ಪತ್ರಿಕೆಗಳ ಸಂಪಾದಕ, ಶಿಕ್ಷಣತಜ್ಞ, ಉತ್ತಮ ಶಿಬಿರ ಶಿಕ್ಷಕ ಮುಂತಾದ ನಾನಾ ಕ್ಷೇತ್ರಗಳಿಂದ, ನಾನಾ ರೀತಿಗಳಿಂದ ಅಸಂಖ್ಯಾತ ಮಹಿಳಾ ಮತ್ತು ಕಬ್ ಮಾಸ್ಟರುಗಳಿಗೂ, ಇತರ ಸ್ಕೌಟರುಗಳಿಗೂ ಇವರು ನೀಡಿರುವ, ನೀಡುತ್ತಿರುವ ಪ್ರೋತ್ಸಾಹವು ಅಗಣಿತವಾಗಿದೆ.

ಶ್ರೀ ಎಂ. ಎಚ್. ರಾಮಚಂದ್ರರಾಯರ 'ಮರಿಗಳ ಪುಸ್ತಕ', ಎಂ. ವೆಂಕಾಟಕೃಷ್ಣಪ್ಪನವರ 'ಕಾಡಿನಕಥೆಗಳು' ಮತ್ತು 'ಮರಿಗಳ ಚೌಚೌ' ಹಾಗೂ ಡಾ. ಎಸ್. ಬಿ.. ಕೌಶಿಕರು ಬರೆದಿರುವ 'ಚಿತ್ರಪಠ' ಗಳು, ಶ್ರೀ ಭೈರಪ್ಪನವರು ದೊಡ್ಡಬಳ್ಳಾಪುರದ ಶಿಬಿರದ ಯೋಗಕ್ಷೇಮ ನಿರ್ವಹಿಸುತ್ತಾ ಶಿಭಿರಗಳನ್ನು ನಡೆಸುತ್ತಾ ಮೈಸೂರು ಸ್ಕೌಟ್ ಪತ್ರಿಕೆಯ ಹೊಣೆಯನ್ನು ಹೊತ್ತಿದ್ದ ವೇಳೆಯಲ್ಲಿ ಕೇಂದ್ರ ಕಛೇರಿಯವರು ಬರೆದು ಪ್ರಕಟಿಸಿರುವ ''ಹಿಂಡನ್ನು ನಡೆಸುವ ಕ್ರಮ'', 'ಕಾಡುಕುಣಿತಗಳು', 'ಮರಿಗಳು' ( ಗಿಲ್‌ಕ್ರಾಪ್ಟ್ ಉಲ್ಫ್ ಕಬ್ಸ್) ಪುಸ್ತಕಗಳು ನಮ್ಮ ರಾಜ್ಯದ ಕಬ್ ಶಿಕ್ಷಕರಿಗೆ ತುಂಬಾ ಸಹಾಯಕವಾಗಿವೆ. ಇತ್ತೀಚೆಗೆ ಮರಿಗಳಿಗೆ ಹೊಂದಿದ 'ಗುರಿ, ಧೋರಣೆ, ನಿಯಮ ಮತ್ತು ಸಂವಿಧಾನ' ವನ್ನು ಎಂ. ವೆಂಕಟಕೃಷ್ಣಪ್ಪನವರು ಸಂಪಾದಿಸಿ ಬರೆದ 'ಮರಿಗಳ ಚೌಚೌ' ಎರಡನೆಯ ಆವೃತ್ತಿಯಾಗಿ ಅಚ್ಚಾಗಿರುವುದು ಅನೇಕರಿಗೆ ತಿಳಿದ ವಿಚಾರ.

ಆ. ಕ. ವಿ. ಕೆ. ಸುಂದರಂ ಅವರು ಶಿಕ್ಷಣ ವಿಭಾಗವನ್ನು ವಹಿಸಿಕೊಂಡ ಬಳಿಕ ಮರಿಗಳ ಶಿಕ್ಷಣ ಶಿಬಿರಗಳನ್ನು ರಾಜ್ಯದ ಎಲ್ಲಡೆ ನಡೆಸುವುದು ಸುಲಭವಾಗುವಂತೆ ಅನೇಕ ಸ್ಕೌಟರ್‌ಗಳನ್ನು ಪ್ರೋತ್ಸಾಹಿಸಿ ಅವಕಾಶ ಕಲ್ಪಿಸಿಕೊಟ್ಟರು. ಈ ರೀತಿ ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿರುವ ಅಗ್ರಗಣ್ಯರಲ್ಲಿ ಕೆಲವರೆಂದರೆ ಸರ್ವ ಶ್ರೀ ಎಂ. ಎಚ್. ರಾಮಚಂದ್ರರಾವ್, ಎನ್. ರಾಮಸ್ವಾಮಿ, ಎಂ. ವೆಂಕಟಕೃಷ್ಣಪ್ಪ, ಆರ್. ಬಿ. ನಾಗರಾಜರಾವ್, ಕೆ. ಎನ್. ರಾಮಸ್ವಾಮಿ, ಶ್ರೀನಿವಾಸರಾವ್ (ಮೈಸೂರು), ಜಿ. ಶೇಷಗಿರಿರಾವ್, ಕೆ. ಬಿ. ನಂಜಪ್ಪ, ಶ್ಯಾಮಾಲಾಲ್, ಎಲಿಜ, ಕೆ. ಕೃಷ್ಣಮೂರ್ತಿ ಮುಂತಾದವರು. ಕಬ್ ಹೆ. ಕ್ವಾ. ಕಮಿಷನರ್‌ಗಳಾಗಿ ಶ್ರೀ ಎ. ಎಂ. ರಾಮರಾಯರು, ಶ್ರೀ ಸಿ. ಶೇಷಾಚಾರರು, ಶ್ರೀ ಕೆ. ಕಾಶಿನಾಥರು ಸಲ್ಲಿಸಿರುವ ಸೇವೆಯನ್ನು ಎಂದೂ ಮರೆಯಲಾಗದು.

೧೯೩೫ರಲ್ಲಿ ಇಂಗ್ಲೆಡಿನಲ್ಲಿ ಮೊದಲನೆಯ ಕಬ್ ಉಡ್ ಬ್ಯಾಡ್ಜ್ ಶಿಬಿರ ನಡೆಯಿತು. ಆಗ ಕೆಲವು ವರ್ಷ ಕಬ್ ವಿಭಾಗ ದವರಿಗೆ ನೀಲಿ, ಸ್ಕೌಟ್ ವಿಭಾಗದವರಿಗೆ ಹಸಿರು ಮತ್ತು ರೋವರ್ ವಿಭಾಗದವರಿಗೆ ಕೆಂಪು (ಮಣಿ) ಬೀಡ್ಸ್‌ಗಳನ್ನು ಕೊಡುತ್ತಿದ್ದರು. ಈಗ ಎಲ್ಲರಿಗೂ ಒಂದೇ ಬಗೆಯ ಮಣಿಗಳಿವೆ.

೧೯೪೪ರಲ್ಲಿ ಬೆಂಗಳೂರಿನಲ್ಲಿ ಮೊಟ್ಟಮೊದಲನೆಯ ಮಹಿಳಾ ಕಬ್ ಮಾಸ್ಟರ್‌ಗಳ ಶಿಕ್ಷಣ ಶಿಬಿರ ನಡೆಯಿತು. ಅಲ್ಲಿಂದ ಈಚೆಗೆ ಮಹಿಳೆಯರಿಗೆಂದೇ ಕೆಲವು ಶಿಬಿರಗಳು ನಡೆದಿದ್ದರೂ ಅನೇಕ ಮಹಿಳೆಯರು ಶಿಕ್ಷಣ ಶಿಬಿರಗಳಲ್ಲಿ ಪುರುಷರೊಂದಿಗೆ ಶಿಕ್ಷಣಗಳಿಸಿ ಉಡ್‌ಬ್ಯಾಡ್ಜ್ ಪ್ರಶಸ್ತಿಗಳಿಸಿರುವುದು ಸುಧಾರಣೆಯೇ ಮಾತ್ರವಲ್ಲದೆ ಹಿತಕರವು ಶ್ರೇಯಸ್ಕರವೂ ಆಗಿದೆ. ಇತ್ತೀಚೆಗೆ ಪಚಮಾರ್ಹಿಯಲ್ಲಿ ನಡೆದ ಶಿಕ್ಷಣನಾಯಕ ಶಿಬಿರದಲ್ಲಿ ಭಾಗವಹಿಸಿ, ಎ. ಎಲ್. ಟಿ. (ಕಬ್ಸ್) ಎಂಬ ಅಧಿಕಾರ ಪ್ರಶಸ್ತಿಗಳಿಸಿ ಬಂದಿರುವ ಕರ್ನಾಟಕದ ಮಹಿಳಾ ಕಬ್ ಮಾಸ್ಟರ್‌ಗಳಾದ ಶ್ರೀಮತಿ ಸಾರಮ್ಮ (ವಿಮಾನ ಪುರ ಪೂರ್ವ, ಹಿರಿಯ ಪ್ರಾಥಮಿಕ ಶಾಲೆ) ಮತ್ತು ಶ್ರೀಮತಿ ಎ. ಗಿರಿಜಾ (ಜಯನಗರದ ಸ್ವತಂತ್ರ ಮರಿಗಳ ಹಿಂಡು) ಇಬ್ಬರು ಸಹಾ ಇಡೀ ಭಾರತ ದೇಶದಲ್ಲಿಯೇ ಈ ಅರ್ಹತೆಗಳಿಸಿರುವ ಮಹಿಳಾ ಕಬ್ ಮಾಸ್ಟರ್‌ಗಳಲ್ಲಿ ಪ್ರಥಮರು

ಎಂಬುದು ಕೇವಲ ಅಭಿನಂದನೀಯ ಮಾತ್ರವಲ್ಲ, ಕರ್ನಾಟಕದಲ್ಲಿ ಕಬ್ ಶಿಕ್ಷಣ ಹೇಗೆ ಮುಂದುವರೆಯುತ್ತಿದೆ ಎಂಬುದರ ಸೂಚಕವೂ ಆಗಿದೆ.

ಬಹುಶಃ ಭಾರತದಲ್ಲಿಯೇ ವಯೋಮಾನದಿಂದ ಅತ್ಯಂತ ಕಿರಿಯ ಸಂಘಟನಾ ಸ್ಕೌಟ್ ಕಮೀಷನರ್ ಆಗಿ ಲೀಡರ್, ಟ್ರೈನರ್ ಸಹ ಆಗಿರುವ ಶ್ರೀ ಎಸ್. ಆದಿಕೇಶವಲು ಅವರು ಸಂಘಟಿಸಿದ ೧೯೭೬ರ ಮರಿಗಳ ವಜ್ರಮಹೋತ್ಸವ, ೧೯೭೮ರ ಶಿವಮೊಗ್ಗ ಮರಿಗಳ ಉತ್ಸವ, ೧೯೭೯ರ ಮರಿಗಳ ಮೇಳಗಳು. ಪ್ರಕಟಿಸಿರುವ ಅತೀ ಶ್ರೇಷ್ಠ ದರ್ಜೆಯವೆನ್ನಬಹುದಾದ ಪದಕಗಗಳ, ನೀತಿ-ಪ್ರತಿಜ್ಞೆ ಚಿತ್ರಪಠಗಳು, ಸರ್ವಶ್ರೀ ಆರ್. ಚಂದ್ರಶೇಖರನ್ ಬೆಂಗಳೂರು, ಎ. ಎಂ. ಗುರುಸ್ವಾಮಿ ದಾವಣಗೆರೆ, ಎಚ್. ಬಿ. ನಾಗರಾಜರಾವ್, ಆರ್. ಎಂ. ಎಚ್. ಸಿದ್ಧಲಿಂಗಯ್ಯ, ಆರ್. ವೆಂಕಣ್ಣ ಬಳ್ಳಾರಿ, ಎಸ್. ಪಿ. ಪೂಣಚ್ಚ, ಮಡಿಕೇರಿ, ಬಿ. ಆರ್. ರಾಮಚಂದ್ರರಾವ್, ಶ್ರೀಮತಿಯರಾದ ಎ. ಗಿರಿಜ ಮತ್ತು ಸಾರಮ್ಮ ಇವರನ್ನೊಳಗೊಂಡು ವರ್ಧಿಸುತ್ತಿರುವ ಮರಿಗಳ ಶಿಕ್ಷಣ ತಜ್ಞರ ತಂಡವು ಕರ್ನಾಟಕದಲ್ಲಿ ಇಂದು ಮರಿಗಳು ಉತ್ತಮ ರೀತಿಯಿಂದ ಮುನ್ನಡೆಯುತ್ತಿರುವುದನ್ನು ತೋರಿಸುತ್ತದೆ.

ಈಗಿನ ಕರ್ನಾಟಕ ರಾಜ್ಯದ ಅಂಗಗಳಾಗಿರುವ ಹಿಂದಿನ ಬೊಂಬಾಯಿ ಪ್ರಾಂತ್ಯದಲ್ಲಿ ಶ್ರೀ ಬಿ. ಟಿ. ಚಾರ್ ಅವರು, ದಕ್ಷಿಣ ಕನ್ನಡದಲ್ಲಿ (ಮಂಗಳೂರು ಬಿ. ಪಿ. ಎಂದು ಜನಪ್ರಿಯರಾಗಿರುವ) ಎಸ್. ವಿಠಲಕಾಮತ್‌ರು, ಬಾಲವೀರ ಕಿಶೋರರು, ಕಿಶೋರ ಬಾಲರು, ಮುಂತಾದ ಹೆಸರುಗಳಿದ್ದ ಹಿಂಡುಗಳನ್ನು ಶಿಕ್ಷಕರನ್ನು ತಯಾರಿಸಿ ಸೇವೆಸಲ್ಲಿಸಿರುತ್ತಾರೆ. ರಾಜ್ಯದ ಪ್ರಧಾನ ಕ. ಶ್ರೀ ಕೊಂಡಜ್ಜಿ ಬಸಪ್ಪ ನವರು ಅವರ ಸಹವರ್ತಿಗಳು ಶ್ರದ್ಧೆ-ಶ್ರಮವಹಿಸಿ ಸಾರ್ವಜನಿಕರಿಂದಲೂ ಸರ್ಕಾರದಿಂದಲೂ ಒಳ್ಳೆಯ ಸಹಕಾರ ಸಿಕ್ಕುವಂತೆ ನಿರ್ದೇಶನ ನೀಡಿರುವುದು ನಿಜಕ್ಕೂ ಸಂತಸದ ವಿಷಯ.

ಇಂಗ್ಲೆಂಡಿನಲ್ಲಿ ಆರಂಭವಾದಂದಿನಿಂದ ಅಲ್ಲಿನ ಧೋರಣೆ ವಿಧಾನಗಳನ್ನೇ ಅನುಸರಿಸಿಕೊಂಡು ಬಂದ ಮೈಸೂರು (ಕರ್ನಾಟಕ) ಭಾರತದ ಮರಿಗಳ ಶಿಕ್ಷಣವಿಧಾನದಲ್ಲಿ ಈಗ ಹಿಂದಾಗಿವೆಯೋ ಎನ್ನಿಸುತ್ತಿದೆ. ಅಲ್ಲಿನ ಮಕ್ಕಳ ಮನಸ್ಸನ್ನು ಅಧ್ಯಯನ ಮಾಡಿ ಬ್ರಿಟನ್ನಿನಲ್ಲಿ ಮರಿಗಳ ಪ್ರತಿಜ್ಞೆ ವಂದನೆ ಉಡುಪು ಪರೀಕ್ಷೆಗಳಲ್ಲಿ ಈಚೇಗೆ ವಿಶೇಷ ಬದಲಾವಣೆಗಳಾಗಿವೆ ಅಮೆರಿಕಾದ ಸಂಯುಕ್ತ ಸಂಸ್ಥಾನಗಳು ತಮ್ಮ ಮಕ್ಕಳ ಅಭಿರುಚಿಗೆ ತಕ್ಕತಹ ಪ್ರತ್ಯೇಕ ಮೌಗ್ಲಿ ಕಥೆಯನ್ನೇ ನಿರ್ಮಿಸಿಕೊಂಡು, ಉಡುಗೆ ಶಿಕ್ಷಣ, ವಂದನೆ, ಪ್ರತಿಜ್ಞೆಪ್ರಗತಿ ವಿಧಾನಗಳನ್ನು ರೂಪಿಸಿಕೊಂಡು ಅದ್ಭುತ ಪ್ರಗತಿಯನ್ನು ಸಾಧಿಸಿ ಮುಂದುವರೆಯುತ್ತಿವೆ. ಕೆನಡಾದ ಮರಿಗಳಿಗೆ ಅತ್ಯಂತ ಶೀತ ಕಾಲದಲ್ಲಿಯೂ ಆರೋಗ್ಯ, ಆಸಕ್ತಿ ಚೈತನ್ಯ ಮತ್ತು ಜ್ಞಾನದ ಅಭಿವೃದ್ಧಿಗೆ ಕಾರಣವಾಗುವ ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ.

ಈ ದೃಷ್ಟಿಯಿಂದ ನೋಡಿದರೆ ಭಾರತದಲ್ಲಿ ಮರಿಗಳ ಶಿಕ್ಷಣಮಟ್ಟ ತೀರಾ ತಗ್ಗಿನದಾಗಿ ತೋರುತ್ತದೆ. ಕರ್ನಾಟಕವೂ ಭಾರತದ ಅವಿಭಾಜ್ಯ ಅಂಗವಾಗಿರುವ ಕಾರಣ ನಾವು ಪ್ರತ್ಯೇಕ ಏನನ್ನೂ ಮಾಡಲಾಗುವುದಿಲ್ಲ ಎಂಬ ನೆಪ ಬೇಡ. ನಮ್ಮಲ್ಲಿರುವ ಬುದ್ಧಿ ಶಕ್ತಿ, ಮನಸ್ಥೈರ್ಯ ಐಕ್ಯಮತ, ಪ್ರಗತಿ ಭಾವನೆಗಳನ್ನು ಬಳಸಿ ನಮ್ಮ ಕನ್ನಡ ಮರಿಗಳು ಹೇಗೆ ಭಾರತ ಕಿಶೋರರಲ್ಲಿ ಅಗ್ರಗಾಮಿಗಳಾಗತಕ್ಕವರು ಎಂಬುದನ್ನು ನಾವು ಸಾಧಿಸಬೇಕಾಗಿದೆ.

ರಾಜ್ಯದ, ರಾಷ್ಟ್ರದ, ವಿಶ್ವದ ಕಲ್ಯಾಣದಲ್ಲಿ ಆಸಕ್ತಿ ಉಳ್ಳವರೆಲ್ಲರಿಗೂ ಇದು ಒಂದು ಸವಾಲು. ಹಿಂದು-ಇಂದು ಆಯಿತು ಮುಂದೆ ?

(ಆಧಾರ : ಮು. ವೆಂಕಟಪ್ಪ ಕೃಷ್ಣಪ್ಪ ಅವರ ಲೇಖನಗಳು)



# ಮರಿಗಳ (ಕಬ್) ಶಿಕ್ಷಣ

ಶ್ರೀ ಎಲ್. ಟಿ. ಲೋಕೇಶ್

ಸ್ಕೌಟ್ ಶಿಕ್ಷಣದ ಮೂಲ ತಳಹದಿಯೇ ಮರಿಗಳ ಶಿಕ್ಷಣ. ಸ್ಕೌಟ್ ಶಿಕ್ಷಣವನ್ನು ಪ್ರಾರಂಭಿಸಿದ ಲಾರ್ಡ್ ಬೇಡನ್ ಪೊವೆಲ್ ಅವರು ತಮ್ಮ ಯೋಜನೆಯಲ್ಲಿ ೧೧ವರ್ಷದ ಒಳಗಿನ ಯುವ ಸಮೂಹವು ತಮ್ಮ ಹಿರಿಯ ಸಹೋದರರ ಜತೆಯಲ್ಲಿ ಸ್ಕೌಟ್ ಟ್ರೂಫ್‌ನಲ್ಲಿ ಸೇರಿಕೊಂಡು ಸ್ಕೌಟುಗಳ ಜತೆ ಅನೇಕ ಚಟುವಟಿಕೆಗಳಲ್ಲಿ ತೊಡಗಿ ಸಂತೋಷದಿಂದ ಕಾಲ ಕಳೆಯುತ್ತಿರುವುದನ್ನು ಗಮನಿಸಿದರು. ಜ್ಞಾನಿಗಳ ಸಲಹೆ ಪಡೆದು ೫ರಿಂದ ೧೦ವರ್ಷದ ಮಕ್ಕಳಿಗೆ ಸ್ಕೌಟಿಂಗ್‌ನ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಯೋಜನೆ ಹಾಕಿದರು.

೧೯೧೩ ರ್ಲಲಿ ಕಿರಿಯ ಯುವಕರ ಕಾರ್ಯಕ್ರಮದ ಬಗ್ಗೆ ಅಧ್ಯಯನ ಮಾಡಿ ಯುವಕರಲ್ಲಿ ಕಿರಿಯವರಾದ ಜೂನಿಯರ್ ಸ್ಕೌಟುಗಳಿಗೆ (ಕಬ್ಸ್) ಒಂದು ನಿಯಮವನ್ನು ಸಿದ್ಧಪಡಿಸಿದರು. ಆದರೆ ಜೂನಿಯರ್ ಸ್ಕೌಟ್ಸ್ ಎಂಬ ಪದವನ್ನು ಅವರು ಪರಿಗಣಿಸಿರಲಿಲ್ಲ. ಮೊದಲು ಬಿ. ಪಿ. ಅವರು Wolf Cubs, ಅಥವಾ CUBS, ಅಥವಾ `YoungScout' ಗಳಿಗೆ ೧೯೧೪ನೆಯ ಜನವರಿಯಲ್ಲಿ ಇನ್ನೊಂದು ನಿಯಮವನ್ನು ಹೆಡ್‌ಕ್ವಾಟ್ರಸ್ ಗೆಜಿಟ್ ನಲ್ಲಿ ಪ್ರಕಟಿಸಿದರು.

ಬಿ. ಪಿ. ಅವರು ೫ರಿಂದ ೧೦ ವರ್ಷದ ವಯಸ್ಸಿನ ಮಕ್ಕಳನ್ನು ವಿಶೇಷ ಚಟುವಟಿಕೆಗಳಲ್ಲಿ ತೊಡಗಿಸಿ ಅವರ ಕೌಶಲ್ಯಗಳನ್ನು ಜ್ಞಾನ ಬುದ್ಧಿಮಟ್ಟವನ್ನು ಹೆಚ್ಚಿಸಿಕೊಳ್ಳುವಂತಹ ಚಟುವಟಿಕೆಗಳಲ್ಲಿ ತೊಡಗಿಸಿಬೇಕಾದಾಗ ಅವರಿಗೆ ತನ್ನ ಆಪ್ತ ಸ್ನೇಹಿತ, ಖ್ಯಾತಕಥೆಬರಹಗಾರರಾದ ರುಡ್‌ಯಾರ್ಡ್ ಕಿಪ್ಲಿಂಗ್ ಅವರ ''ಜಂಗಲ್ ಬುಕ್''ನ್ನು ಆಧರಿಸಿ ಮೌಗ್ಲಿ ಕಥೆಯ ಮೂಲಕ ಕಬ್ಬಿಂಗ್ ಶಿಕ್ಷಣವನ್ನು ಪ್ರಾರಂಭಿಸಲು ಸಹಾಯ ಮಾಡಬೇಕೆಂದು ಕೋರಿದರು. ರುಡ್‌ಯಾರ್ಡ್ ಕಿಪ್ಲಿಂಗ್ ಅವರ ''ಕಾಡು ಕಥೆಗಳು'' ಆಧಾರದದಿಂದ ಮರಿಗಳ ಶಿಕ್ಷಣವನ್ನು ನಿರೂಪಿಸಿದರು.

ನಂತರ "Wolf cub's hand book" ಪುಸ್ತಕವನ್ನು ಬಿ. ಪಿ. ಅವರು ಮರಿಗಳಾಗಿ ಡಿಸೆಂಬರ್ ೨ನೆಯ ತಾರೀಖು ೧೯೧೬ರಲ್ಲಿ ಪ್ರಕಟಿಸಿದರು.

ಶಿಕ್ಷಣ ಸಂಸ್ಥೆಗಳಲ್ಲಿ, ೫ ರಿಂದ ೧೦ ವರ್ಷದೊಳಗಿನ ಬಾಲಕರನ್ನು ಆರಿಸಿ ಮರಿಗಳ ಶಿಕ್ಷಣ ನೀಡುವುದು ತುಂಬಾ ಅಗತ್ಯವಾಗಿದೆ. ಕಬ್ ಶಿಕ್ಷಣವನ್ನು ಮಕ್ಕಳಿಗೆ ಸರಿಯಾಗಿ ನೀಡಿದಲ್ಲಿ ಉತ್ತಮ, ಗುಣ ನಡತೆಗಳಿರುವ ಬಾಲಕರನ್ನು ಸಮಾಜಕ್ಕೆ ನೀಡಲು ಸಾಧ್ಯವಿದೆ. ಈ ಕಾರ್ಯಕ್ಕೆ ನಿಷ್ಠೆ ಮತ್ತು ಸೇವಾಮನೋಭಾವನೆ ಮಾತ್ರ ಆವಶ್ಯಕವಾಗಿ ಬೇಕಾಗಿದೆ.

ಕಬ್ ಮಾಸ್ಟರ್ ಆಗಿ ತರಬೇತಿ ಪಡೆದ ಶಿಕ್ಷಕ-ಶಿಕ್ಷಕಿಯರು ತಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ೫ ರಿಂದ ೧೦ ವರ್ಷದ ಬಾಲಕರನ್ನು ೧೨ ರಿಂದ ೨೪ ಸಂಖ್ಯೆಯಲ್ಲಿ ಆರಿಸಿ, ಅವರಿಗೆ ವಿವಿಧ ಆಟಗಳು, ಹಾಡುಗಳು, ಅಭಿನಯ ಗೀತೆಗಳು, ಹಾಡು, ಕುಣಿತಗಳ ಮೂಲಕ ಸಂಬಂಧಿಸಿದ ಶಿಕ್ಷಣವನ್ನು ನೀಡಬೇಕು. ಬಾಲಕರಿಗೆ ಆರಂಭಿಗರು (ರಿಕ್ರೂಟ್ಸ್) ಎನ್ನುತ್ತಾರೆ. ಇವರ ಸಮೂಹಕ್ಕೆ ''ಕಬ್ ಪ್ಯಾಕ್'' (ಮರಿಗಳ ಹಿಂಡು) ಎಂದು ಕರೆಯುವರು, ಅವರಲ್ಲಿ ನಾಯಕತ್ವದ ಗುಣ ಬೆಳೆಸುವ ಸಲುವಾಗಿ ೪ರಿಂದ ೬ಮಂದಿ ಇರುವ ಸಣ್ಣ ಗುಂಪುಗಳಾಗಿ. (ಸಿಕ್ಸ್) ವಿಂಗಡಿಸಿ ಒಂದೊಂದು ಬಣ್ಣದ ಹೆಸರನ್ನು ನೀಡಲಾಗುತ್ತದೆ.

ಕಬ್ಬಿಂಗ್ ಶಿಕ್ಷಣಕ್ಕೆ (ಹಿಂಡಿಗೆ) ಸೇರಿದ ಬಾಲಕರು ವಿವಿಧ ಚಟುವಟಿಕೆಯೊಂದಿಗೆ, ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಪ್ರಗತಿ ಪಡೆಯಲು ಬೇರೆ ಬೇರೆ ಪ್ರಾವಿಣ್ಯತಾ ಪದಕಗಳನ್ನು ಗಳಿಸಲು ಪ್ರಗತಿಪರ ಶಿಕ್ಷಣ ಕ್ರಮವನ್ನು ಕಬ್ಬಿಂಗ್‌ನಲ್ಲಿ ಯೋಚಿಸಲಾಗಿದೆ. ಈ ಶಿಕ್ಷಣದಲ್ಲಿ

ಮೊದಲನೆಯ ಹಂತ ಪ್ರವೇಶ
ಎರಡನೆಯ ಹಂತ ಪ್ರಥಮ ಚರಣ
ಮೂರನೆಯ ಹಂತ ದ್ವಿತೀಯ ಚರಣ
ನಾಲ್ಕನೆಯ ಹಂತ ತೃತಿಯ ಚರಣ
ಐದನೆಯ ಹಂತ ಚತುರ್ಥ ಚರಣ
ಆರನೆಯ ಹಂತ ಗೋಲ್ಡನ್ ಆ್ಯರೋ

ಚತುರ್ಥ ಚರಣ ಪದಕವನ್ನು ಕಬ್ಬಿಂಗ್‌ಗಳಿಗೆ ರಾಜ್ಯದ ರಾಜ್ಯಪಾಲರಿಂದ ರಾಜಭವನದಲ್ಲಿ ಪ್ರತಿವರ್ಷ ಪ್ರಶಸ್ತಿ ಪ್ರದಾನ ಮಾಡುವರು.

ಗೋಲ್ಡನ್ ಆ್ಯರೋ, ಪದಕವನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನ ರಾಷ್ಟ್ರ ಸಂಸ್ಥೆಯ ಅಧ್ಯಕ್ಷರು ನವದೆಹಲಿಯಲ್ಲಿ ಕಬ್‌ಗಳಿಗೆ ನೀಡುವರು, ಮಕ್ಕಳಿಗೆ ನಡತೆ, ಆರೋಗ್ಯ, ಕರಕುಶಲತೆ ಮತ್ತು ಸೇವೆ ಈ ನಾಲ್ಕು ವಿಷಯಗಳಲ್ಲಿ ಪ್ರಾವೀಣ್ಯತಾ ಪದಕಗಳನ್ನು ನೀಡಲಾಗುತ್ತದೆ.

ಮರಿಗಳ ಶಿಕ್ಷಣದಲ್ಲಿ ಆರಂಭಿಕರಾಗಿ ಸೇರಿದ ಬಾಲಕರು ಕಾಡಿನ ಕಥೆ, ಮರಿಯ ನಿಯಮ, ಪ್ರತಿಜ್ಞೆ, ವಂದನೆ, ಹಸ್ತಲಾಘವ, ಧ್ಯೇಯ ವಾಕ್ಯ, ಘನವಂದನೆ, ದಿನಕ್ಕೊಂದು ಉಪಕಾರ, ದೇವತಾ ಪ್ರಾರ್ಥನೆಗಳನ್ನು ಸರಿಯಾಗಿ ಅರಿತು ನಿತ್ಯ ಜೀವನದಲ್ಲಿ ಮಾಡಬೇಕು.

ಕಾಡಿನ ಕಥೆಯಲ್ಲಿ ಬರುವ ಅಕೇಲ, ಶೇಖ್ ಖಾನ್, ತಬಾಕಿ, ಬಾಲೂ, ಭಗೀರ, ಕಾ, ತೋಳಗಳು ಇತ್ಯಾದಿ ಪ್ರಾಣಿಗಳೊಂದಿಗೆ ಮಾನವ ಶಿಶುವಾದ ಮೌಗ್ಲಿ ಹೇಗೆ ಬೆಳೆಯುತ್ತಾನೆ. ಅವುಗಳಿಂದ ಪಡೆಯುವ ಶಿಕ್ಷಣ, ಗುಣ, ನಡೆತೆಗಳು, ಕುಣಿತಗಳ ಬಗ್ಗೆ ತಿಳುವಳಿಕೆ ಸಿಗುತ್ತದೆ.

ಕಬ್ಬಿಂಗ್ ಶಿಕ್ಷಣದಿಂದ ಬಾಲಕರಿಗೆ ಆಗುವ ಪ್ರಯೋಜನಗಳು.

೧. ಮರಿಗಳ (ಕಬ್ಬಿಂಗ್) ಶಿಕ್ಷಣದಿಂದ ಬಾಲಕರಿಗೆ ಒಳ್ಳೆಯ ಸ್ನೇಹಿತರು ದೊರಕುವರು.
೨. ಕಬ್ಬಿಂಗ್ ಶಿಕ್ಷಣದಿಂದ ದಿನಕ್ಕೊಂದು ಉಪಕಾರ ಮಾಡುವುದನ್ನು ಮನೆಯಲ್ಲಿ ಮತ್ತು ಇತರ ಕಡೆಗಳಲ್ಲಿ ಕಲಿಯುತ್ತಾನೆ.
೩. ತನ್ನಲ್ಲಿರುವ ಪ್ರತಿಭೆಯನ್ನು ಕೌಶಲ್ಯತೆಗಳನ್ನು ಪ್ರದರ್ಶಿಸಲು ಉಪಯುಕ್ತವಾಗಿದೆ.
೪. ಮರಿಗಳ ಶಿಕ್ಷಣದಿಂದ ಬಾಲಕನನ್ನು ಆರೋಗ್ಯವಂತನನ್ನಾಗಿ ಮಾಡುತ್ತದೆ.
೫. ಸ್ವಾವಲಂಭಿಯಾಗಲು ಕಲಿಯುತ್ತಾನೆ.
೬. ಕೈಲಾದಷ್ಟು ಸಾಧಿಸುತ್ತೇವೆ ಎಂಬ ಧ್ಯೇಯ ವಾಕ್ಯದಂತೆ ಮಾಡುವ ಪ್ರತಿ ಕೆಲಸದಲ್ಲಿ ಅವರ ಶಕ್ಯನುಸಾರ ಸಾಧಿಸಲು ಮುಂದೆ ಬರುತ್ತಾರೆ.



ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ ಮತ್ತು ಗೈಡ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

- ಮಹಾತ್ಮ ಗಾಂಧಿ

# ಮರಿಗಳ ಮುನ್ನಡೆಯಲ್ಲಿ ನಾಯಕನ ಪಾತ್ರ

ಶ್ರೀಮತಿ ಸಂಧ್ಯಾರಾಣಿ.

ಮರಿಗಳ ಶಿಕ್ಷಣವು ''ರುಡ್ ಯಾರ್ಡ್ ಕಿಪ್ಲಿಂಗ್'' ಅವರ ಕಾಡಿನ ಕಥೆಗಳ ಆಧಾರದ ಮೇಲೆ ನಿರೂಪಿತವಾಗಿವೆ. ಸಣ್ಣ ವಯಸ್ಸಿನ ಪ್ರಾಣಿಗಳನ್ನು ಕಾಡುಮರಿಗಳೆಂದು ಕರೆಯುವಂತೆ ೫ವರ್ಷದಿಂದ೧೦ವರ್ಷದವರೆಗಿನ ಬಾಲಕನನ್ನು 'ಮರಿ' ಅಥವಾ ಕಬ್ ಎಂದು ಕರೆಯುವರು. ೧೨ ರಿಂದ ೧೪ ವರ್ಷದ ಮರಿಗಳು ಇರುವ ಹಿಂಡಿಗೆ ಕಬ್‌ಪ್ಯಾಕ್ ಎಂದು, ಈ ಮಕ್ಕಳನ್ನು ತರಬೇತಿ ಗೊಳಿಸುವ ಶಿಕ್ಷಕರನ್ನು ಅಖೇಲ ಅಥವಾ ಕಬ್ ಮಾಸ್ಟರ್ ಎಂದು ಕರೆಯುವರು. ಬಾಲಕನಾಗಿರುವ ಮರಿ ರಾಷ್ಟ್ರದ ಸತ್ಪ್ರಜೆಯಾಗುವ ಅರ್ಹತೆಗಳಿಸಲು ಮರಿಗಳ ಹಿಂಡಿನಲ್ಲಿ ಸೇರಬೇಕಾಗುತ್ತದೆ. ಹಿಂಡಿಗೆ ಸೇರಿದ ಮರಿಗೆ ಸದಸ್ಯತ್ವ ಕೊಡಲು ಪ್ರತಿಜ್ಞೆ, ನಿಯಮ, ಪ್ರಾರ್ಥನೆ, ವಂದನೆ, ಹಸ್ತಲಾಘವ, ಸೂಕ್ತಿ, ಅಭಿವಂದನೆ, ಉಪಕಾರ ಮಾಡುವ ಗುಣ, ಕಾಡಿನ ಕಥೆ ಮೊದಲಾದವುಗಳನ್ನು ಕಲಿಸಬೇಕಾಗುತ್ತದೆ.

ಮರಿಯು ಇಲ್ಲಿ ಕಲಿತಷ್ಟು ಮುಂದೆ · ಉತ್ತಮ ನಾಯಕನಾಗಬಲ್ಲ. ಇಂತಹ ಅರ್ಹತೆಯನ್ನು ನೀಡಬಲ್ಲ ಗುರು ಎಂದರೆ ಮರಿಗಳ ನಾಯಕರೊಬ್ಬರೇ. ಮರಿಗಳ ಹಿಂಡಿನಲ್ಲಿ ಮರಿಗಳ ನಾಯಕರ ಪಾತ್ರ ಬಹಳ ಮಹತ್ವವಾದುದು. ಬಾಲಕರಲ್ಲಿ ಅತ್ಯುತ್ತಮವಾದ ಗುಣಗಳನ್ನು ಸೇವಾ ಮನೋಭಾವನೆಯನ್ನು ಹಿರಿಯರ ವಾಕ್ಯ ಪರಿಪಾಲನೆಯನ್ನು, ಕರ್ತವ್ಯ ನಿಷ್ಠೆಯನ್ನು, ಸರ್ವಧರ್ಮ ಸಮಾನತ್ವವನ್ನು, ಉದಾತ್ತತೆಯನ್ನು, ಕರ್ತವ್ಯ ದಕ್ಷತೆಯನ್ನು , ಸ್ವಾವಲಂಬನೆಯನ್ನು, ಪರೋಪಕಾರಿ ಗುಣಗಳನ್ನು ಬಿಂಬಿಸುವಲ್ಲಿ ಗುರುಸ್ಥಾನವನ್ನು ಪಡೆದ ನಾಯಕತ್ವವನ್ನು ಹೊಂದಿದ ಮರಿಗಳ ನಾಯಕನ ಪಾತ್ರ ಹಿರಿದಾದುದು. ಹಾಗಾಗಿ ತಾನು ಮೊದಲು ತನ್ನ ಕರ್ತವ್ಯ ಹಾಗೂ ಜವಾಬ್ದಾರಿಗಳನ್ನು ಅರಿತುಕೊಂಡು ಬಾಲಕರ ಮನೋವೈಜ್ಞಾನಿಕ ಭಾವನೆಗಳನ್ನು ಗಮನಿಸಿ ಅದಕ್ಕೆ ತಕ್ಕಂತೆ ಬೋಧಿಸುವುದು ಅಗತ್ಯವಾಗಿದೆ.

ಮರಿಗಳಾದರೊ ಸಾಮಾನ್ಯ ಬಾಲಕರಂಥಲ್ಲ. ಇಂತಹ ಬಾಲಕರಿಗಿಂತ ಭಿನ್ನವಾದ ವಿಶೇಷ ಅರ್ಹತೆಯನ್ನು ಪಡೆದಿರುವರು. ಮರಿಗಳ ಹಿಂಡಿನಲ್ಲಿ ಮರಿಯು ಮಾನಸಿಕವಾಗಿ, ದೈಹಿಕವಾಗಿ, ಬೌದ್ಧಿಕವಾಗಿ ಮತ್ತು ಸರ್ವಾಂಗೀಣ ವಿಕಾಸದತ್ತ ಮುನ್ನಡೆಯುವ ಮಹತ್ತರವಾದ ಅಂಶಗಳನ್ನು ಇಲ್ಲಿ ಕಲಿಯುತ್ತಾನೆ. ಆದುದರಿಂದ ಮರಿಯ ಬಯಕೆಯನ್ನು ಪೂರೈಸುವಂತಹ ಅವರಲ್ಲಿ ಸೃಜನ ಶೀಲತೆಯನ್ನು ಮೂಡಿಸುವಂತಹ ಚಟುವಟಿಕೆಗಳಲ್ಲಿ ತೊಡಗಿಸುವ ಕಾರ್ಯದಲ್ಲಿ ಮರಿಗಳ ನಾಯಕರು ಕಾರ್ಯಪ್ರವೃತ್ತರಾಗಿರ ಬೇಕಾಗುತ್ತದೆ. ಈ ಕಾರ್ಯಕ್ಕೆ ನೆರವಾಗಲು ಮರಿಗಳ ತರಬೇತಿಯ ಯೋಜನೆಯಲ್ಲಿ ರೂಪಿಸಿರುವಂತೆ ತನ್ನ ಆರೋಗ್ಯದ ಬಗ್ಗೆ ತಾನು ಉಪಯೋಗಿಸುವ ವಸ್ತುಗಳ ಬಗ್ಗೆ ವ್ಯಾಯಾಮ, ಹಾಗೂ ದೈಹಿಕ ಚಟುವಟಿಕೆಗಳು, ಪ್ರಕೃತಿವೀಕ್ಷಣೆ, ಕರಕುಶಲ ವಸ್ತುಗಳ ತಯಾರಿಕೆ, ತನ್ನ ಪರಿಸರದ ಸುತ್ತಮುತ್ತಲ ವಿಷಯಗಳ ಬಗ್ಗೆ ಮಾಹಿತಿ ಪಡೆಯುವಿಕೆ, ಗಂಟುಗಳು, ತೋಟಗಾರಿಕೆ, ಕಥೆ ಹೇಳುವುದು, ಅಭಿನಯ, ಚಿತ್ರ ಬರೆಯುವುದು, ಬಣ್ಣ ಹಾಕುವುದು ಮೊದಲಾದ ಹಲವು ಕಾರ್ಯಚಟುವಟಿಕೆಗಳಲ್ಲಿ ಸೂಕ್ತ ಸಮಯ ಹಾಗೂ ಸೂಕ್ತ ವೇಳೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಹಿಂಡಿನಲ್ಲಿ ಉತ್ತಮ ಮರಿಯಾಗಿ ಮುಂದೆ ಉತ್ತಮ ಸ್ಕೌಟ್ ಆಗಲು ಮಾರ್ಗದರ್ಶನ ಮಾಡಿ ಅವಕಾಶಗಳನ್ನು ಕಲ್ಪಿಸಿಕೊಡಬೇಕಾಗುತ್ತದೆ. ಇದಕ್ಕಾಗಿ ಮರಿಗಳ ನಾಯಕನು ತಾನು ಬೆಳೆದು ತನ್ನ ಮರಿಗಳನ್ನು ಬೆಳೆಸಬೇಕಾಗುತ್ತದೆ.

# ಕಬ್ಸ್ ಮತ್ತು ಬುಲ್ ಬುಲ್ ಉತ್ಸವ

ಪ್ರೊ. ಎಂ. ಎಸ್. ಅಪ್ಪ

ಕರ್ನಾಟಕ ಜನಪದದಲ್ಲಿ ಮಕ್ಕಳ ಬಗ್ಗೆ ಏನೇನು ಕಲ್ಪನೆಗಳು, ಏನೇನೋ ಭಾವನೆಗಳು !

ಆಡಿ ಬಾ ನ ಕಂದ ಅಂಗಾಲತೊಳೆದೇನು
ತೆಂಗೀನಕಾಯತಿಳಿನೀರ, ತೆಂಗಿನಕಾಯಿ ತಿಳಿನೀರ
ತಕ್ಕೊಂಡು ಬಂಗಾರದ ಮೋರೆ ತೊಳೆದೇನು
ಅತ್ತುಕಾಡುವನಲ್ಲ, ಮತ್ತೆ ಬೇಡುವನಲ್ಲ
ಎತ್ತಿಕೊಳ್ಳೆಂಬ ಹಠವಿಲ್ಲ, ಎತ್ತಿಕೊಳ್ಳೆಂಬಹಠವಿಲ್ಲ
ನಿನ್ನಂಥ ಹತ್ತುಮಕ್ಕಳು ಇರಲಿ ಮನೆಯೊಳಗೆ
ಏನೆಲ್ಲಾ ಬೇಡಾಲಿ, ಏನೆಲ್ಲಾ ಕೇಳಾಲಿ ಶಿವನನ್ನು
ಏನೇ ಕೊಡದಿರಲಿ, ಏನೇ ಸಿಗದಿರಲಿ ಶಿವನೇ
ಮಕ್ಕಳಿರಲವ್ವ ಮನೆತುಂಬ

ಈ ಉದಾರಭಾವನೆಯ ನಾಡು ಇಂದಿಗೂ ಈ ಪರಂಪರೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿದೆ. ಮಕ್ಕಳಿಲ್ಲದ ಮನೆ ಮರುಭೂಮುಯಿದ್ದಂತೆ. ಮಕ್ಕಳೇ ಜೀವ, ಮಕ್ಕಳೇ ಜೀವಾಳ, ಮಕ್ಕಳೇ ಜನ್ಮ ಜನ್ಮಾಂತರದ ಮೋಕ್ಷಕ್ಕೆ ಮೆಟ್ಟಿಲುಗಳು.

ಬ್ರೌನ್‌ಸೀ ದ್ವೀಪದ ಪ್ರಯೋಗದ ನಂತರ ಲಾಡ್ ಬೇಡನ್ ಪೊವೆಲ್ಲರಿಗೆ ಮಕ್ಕಳನ್ನು ಸ್ಕೌಟಿಂಗ್ ಗೈಡಿಂಗ್ ಆಂದೋಲನದಲ್ಲಿ ತೊಡಗಿಸುವ ಆಸೆ ಮೊಳಕೆಯೊಡೆದು ಕಬ್ಬಿಂಗ್, ಬುಲ್‌ಬುಲ್ ಪ್ರಾರಂಭವಾಯಿತು.

``Catch them young" ಬೇಡನ್ ಪೊವೆಲ್ಲರಿಗೆ ದಿಕ್ಸೂಚಿಯಾಯ್ತು, ಆರರಿಂದ ಹತ್ತು ವರ್ಷಪ್ರಾಯದ ಮಕ್ಕಳನ್ನು ಮರಿಗಳು, ಹಕ್ಕಿಗಳು (Cubs & Bul Buls) ಎಂಬ ನಾಮಾಂಕಿತದಿಂದ ಈ ಚಳುವಳಿಯಲ್ಲಿ ಬರಮಾಡಿ ಕೊಂಡರು. ಆಯಾವಯಸ್ಸಿಗನುಗುಣವಾದ ಮಕ್ಕಳ ಅಭಿರುಚಿ, ಆಟೋಟ ಇಚ್ಛೆ ಇಂಗಿತಗಳ ಬಗ್ಗೆ ಸಂಶೋಧನೆ ನಡೆಸಿ ಮಕ್ಕಳಿಗಾಗಿಯೇ ಒಳಾಂಗಣ, ಹೊರಾಂಗಣ ಚಟುವಟಿಕೆಗಳನ್ನು ಪ್ರಯೋಗ ಮಾಡತೊಡಗಿದರು.

ಈ ಪ್ರಯೋಗದ ಪ್ರತಿಫಲವೇ ಕಬ್ಸ್ ಮತ್ತು ಬುಲ್‌ಬುಲ್ ಸಮಾವೇಶ. ರಾಜ್ಯಮಟ್ಟದಲ್ಲಿ ಕರ್ನಾಟಕ ಭಾರತ್‌ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಸತತವಾಗಿ ಈ ಉತ್ಸವವನ್ನು ಹಲವು ವರ್ಷಗಳಿಂದ ನಡೆಸಿಕೊಂಡು ಬರುತ್ತಿದೆ. ಈ ಭಾರಿ ಉತ್ಸವದ ಜವಾಬ್ದಾರಿ ಚಿಕ್ಕಮಗಳೂರು ಜಿಲ್ಲೆಯದು.

ಸಮಾವೇಶದಲ್ಲಿ ಎಲ್ಲ ತರಬೇತಿದಾರರೂ, ಶಿಕ್ಷಕರು ಮಕ್ಕಳ ಮನಸ್ಸರಿತು, ಪ್ರಾಮಾಣಿಕ ಪ್ರಯತ್ನ ಮಾಡಿ ಆ ಮಕ್ಕಳ ಮನಸ್ಸಿನ ಮೇಲೆ ಆರೋಗ್ಯಕರ ಪರಿಣಾಮ ಉಂಟಾಗುವಂತೆ ಎಚ್ಚರಿಕೆವಹಿಸಬೇಕಾದುದು ಅತ್ಯಗತ್ಯ. " Child is the father of Man" ಎಂಬ ಮಾತು ನಮ್ಮೆಲ್ಲರಿಗೆ ದಾರಿದೀಪವಾಗಬೇಕು

# ನೀವ್-ಸಾ-ಧೀ-ಸಿ, ನಾವ್-ಸಾ-ಧೀ-ಪೇ-ವು

ಎ. ಲಕ್ಷ್ಮಣ ದಾಸ್

ಸ್ಕೌಟ್ ಚಳುವಳಿಯು ಪ್ರಥಮಬಾರಿಗೆ ಇಂಗ್ಲೆಂಡ್‌ನಲ್ಲಿ ೯೦೭ರ ಆಗಸ್ಟ್‌ನಲ್ಲಿ ಪ್ರಾರಂಭವಾಯಿತು. ಇಂಗ್ಲೆಂಡಿನ ಬ್ರೌನ್ಸಿ ್ವೀಪದಲ್ಲಿ ಪ್ರಾರಂಭಿಸಿದ ಪ್ರಾಯೋಗಿಕ ಶಿಬಿರ, ನಂತರ ಭಾರತದಲ್ಲಿ ೧೯೦೯ ರಲ್ಲಿ ಪ್ರಾರಂಭವಾಗಿ, ಕರ್ನಾಟಕದಲ್ಲಿ ೯೧೭ರಲ್ಲಿ ರಾಜಾಶ್ರಯದಲ್ಲಿ ಅಂದಿನ ಮಹಾರಾಜರಾಗಿದ್ದ ೀ ಕೃಷ್ಣರಾಜಒಡೆಯರ್ ಅವರೇ ಪೋಷಕರಾಗಿದ್ದು ಅವರ ಸೋದರ ಯುವರಾಜ ಶ್ರೀ ಕಂಠೀರವ ನರಸಿಂಹರಾಜಒಡೆಯರ್ ಅವರು ಸಂಸ್ಥೆಯ ರಾಜ್ಯ ಮುಖ್ಯಸ್ಥರಾಗಿ ಚಾಲನೆ ನೀಡಿದರು. ಾಗಿನ ಮಹಾರಾಜರು ೧೯೧೭ರ ಅಕ್ಟೋಬರ್ ೩ ರಂದು ಂದು ರಾಜಾಜ್ಞೆಯನ್ನು ಹೊರಡಿಸಿ, ರಾಜ್ಯದ ಎಲ್ಲಾ ಜಿಲ್ಲೆಗಳ ಾಲೆಗಳಲ್ಲಿ ಸ್ಕೌಟ್ ಚಟುವಟಿಕೆಗಳನ್ನು ಆರಂಭಿಸಬೇಕೆಂದು ೂಚಿಸಿದರು. ೧೯೫೧ ರ ವರೆಗೆ ಪ್ರತ್ಯೇಕವಾಗಿ ಬೆಳೆದ ಎರಡು ಂಘಟನೆಗಳು ಒಂದುಗೂಡಿ ಭಾರತ್ ''ಸ್ಕೌಟ್ ಮತ್ತು ಗೈಡ್ಸ್'' ಂಬ ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಈಗ ವಿಶ್ವದ ೧೬ ರಾಷ್ಟ್ರಗಳು ಮತ್ತು ಪ್ರಾಂತಗಳಲ್ಲಿ ೨೮ ದಶಲಕ್ಷಕ್ಕೂ ಚ್ಚು ಜನ ಈ ಚಳವಳಿಗೆ ಸೇರಿದ್ದಾರೆ. ಇದರಲ್ಲಿ ಕಿರಿಯರು, ರಿಯರು ಸ್ತ್ರೀ-ಪುರುಷ ಭೇದವಿಲ್ಲದೆ ವಿಶ್ವಭ್ರಾತೃತ್ವದಲ್ಲಿ ಸೇವೆ ಲ್ಲಿಸುತ್ತಿದ್ದಾರೆ. ವಿಶ್ವದ ೧೫೧ಕ್ಕೂ ಹೆಚ್ಚಿನ ದೇಶಗಳಲ್ಲಿ ಂತಾರಾಷ್ಟ್ರೀಯ ಮನ್ನಣೆ ಪಡೆದ ರಾಷ್ಟ್ರೀಯ ಸ್ಕೌಟ್ ಸಂಸ್ಥೆಗಳಿವೆ.

ಸ್ಕೌಟ್ ಮತ್ತು ಗೈಡ್ ೧೦ ರಿಂದ ೧೬ ವರ್ಷದ ಕ್ಕಳಾದರೆ, ಕಬ್ ಮತ್ತು ಬುಲ್ ಬುಲ್‌ಗಳ ವಯೋಮಿತಿ ರಿಂದ ೧೦ ವರ್ಷಗಳದ್ದು, ಈ ಸ್ಕೌಟ್ ಮತ್ತು ಗೈಡ್ ಳವಳಿಯಶುಭಾರಂಭವು ಲಾರ್ಡ್ ಬೇಡನ್ ಪೊವೆಲ್ ವರಿಂದ ಆಯಿತು. ಮಕ್ಕಳ ಮನಸ್ಸಿಗೆ ಹಾಗೂ ವಯಸ್ಸಿಗೆ ಅನುಗುಣವಾಗಿ ವಯೋಮಿತಿಯನ್ನು ನೀಡಿ ತನ್ನ ವಿಚಾರಗಳನ್ನು ಅಭಿವ್ಯಕ್ತಗೊಳಿಸಿ, ಮಕ್ಕಳ ಶಿಸ್ತು, ಶೀಲವರ್ಧನೆ, ಉತ್ತಮ ನಾಗರಿಕರನ್ನಾಗಿ ಮಾಡಲು ಸಹಾಯ ಮಾಡಿದರು.

ಕಬ್ ಬಾಲಕರಿಗಾಗಿ, ಅವರ ಹಿಂಡನ್ನು ಪ್ಯಾಕ್ ಅಥವಾ ಷಟ್ಕ ಎಂದು ಕರೆಯುತ್ತಾರೆ. ಕಬ್ ಪ್ರತಿಜ್ಞೆ(ಭಾಷೆ) ಈ ರೀತಿ ಇದೆ. ''ನಾನು, ನನ್ನ ಕೈಲಾದ ಮಟ್ಟಿಗೆ ದೇವರು ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯವವನ್ನು ಮಾಡುತ್ತೇನೆ. ಮರಿಗಳ ನಿಯಮವನ್ನು ಪಾಲಿಸುತ್ತೇನೆ. ಪ್ರತಿ ದಿನವೂ ಒಂದು ಉಪಕಾರವನ್ನು ಮಾಡುತ್ತೇನೆ''. ಎಂದು ಈ ಭಾಷೆಯನ್ನು ದೀಕ್ಷಾ ಸಮಾರಂಭದಲ್ಲಿ ಕೊಡುವುದರಿಂದ ಮರಿ ಎಂದು ಕರೆಯಲ್ಪಡುತ್ತಾನೆ. ಭಾಷೆ ಕೊಟ್ಟು ಅಂತೆಯೇ ನಡೆದುಕೊಳ್ಳುತ್ತಾನೆ. ಈ ಭಾಷೆಯನ್ನು ಕಬ್ ಮಾಸ್ಟರನು ಅರ್ಥಪೂರ್ಣವಾಗಿ ತಿಳಿಯಪಡಿಸುತ್ತಾನೆ. ದೇವರನ್ನು ನಂಬುವುದು ಸದಾಚಾರದ ಪ್ರತೀಕವಾಗಿದೆ. ಎಲ್ಲಾ ಧರ್ಮವನ್ನು ಗೌರವಿಸುವುದು ಮತ್ತು ಮರ್ಯಾದೆಯಿಂದ ನಡೆಯುವಂತೆ ಮಾಡುವುದು ಕಬ್ ಮಾಸ್ಟರನ ಕರ್ತವ್ಯವಾಗಿರುತ್ತದೆ. ಮರಿಯು ಹಿರಿಯರಿಗೆ ವಿಧೇಯನು. ಮರಿಯು ವಿನಯಿ ಮತ್ತು ನಿರ್ಮಲನು. ಈ ತರಬೇತಿಯ ಒಂದು ದಳದಲ್ಲಿ ಸುಮಾರು ೨೪ ಮಕ್ಕಳ ಒಂದು ಹಿಂಡು ಸಾಮಾನ್ಯವಾಗಿ ೬ ಮಕ್ಕಳ ಗುಂಪುಗಳ ಆಧಾರದ ಮೇಲೆ ತರಬೇತಿ ನಡೆಯುತ್ತದೆ. ಪ್ರತಿ ಗುಂಪಿಗೆ ಓರ್ವ ನಾಯಕ, ನಾಯಕಿ ಮತ್ತು ಸಹಾಯಕರಿರುತ್ತಾರೆ. ಸಣ್ಣ ಗುಂಪುಗಳಲ್ಲಿ ಕೆಲಸ ಮಾಡಲು ಮತ್ತು ನಾಯಕತ್ವ ವಹಿಸಲು ಇದು ನೆರವಾಗುತ್ತದೆ. ವಯಸ್ಕ ನಾಯಕ ಕಬ್‌ಮಾಸ್ಟರ್ ಎಂದು ವಯಸ್ಕ ನಾಯಕಿ ಫ್ಲಾಕ್‌ಲೀಡರ್ ಎಂದೂ ಕರೆಯಲ್ಪಡುತ್ತಾರೆ.

ಮರಿಯು ದೇಶದ ಬಗ್ಗೆ ಪ್ರೇಮವನ್ನು ವ್ಯಕ್ತಪಡಿಸುತ್ತಾ ರಾಷ್ಟ್ರಲಾಂಛನಗಳ ಬಗ್ಗೆ ಜವಾಬ್ದಾರಿಯುತನಾಗಿ ಕಲಿಯುತ್ತಾ

ಸ್ವತೃಪ್ತಿಯಾಗುತ್ತಾನೆ. "ಮನೆಯೇ ಮೊದಲ ಪಾಠಶಾಲೆ" ಎನ್ನುವಂತೆ ಮರಿಯ ಉಪಕಾರ ತಾಯಿಯ ಎಲ್ಲಾ ಕೆಲಸ ಕಾರ್ಯಗಳಲ್ಲಿ, ಸಂತೋಷದಿಂದ ಸಹಕರಿಸಿ ಹೆಮ್ಮೆಪಡುತ್ತಾನೆ. ಸಮವಸ್ತ್ರದೊಂದಿಗೆ ಮರಿಯು ಶಾಲೆ, ಸಮಾಜ ಹಾಗೂ ತನ್ನ ಪರಿಸರದಲ್ಲಿನ ಅಂಗಳಲ್ಲಿದ್ದು, ತನ್ನ ಕೈಯಲ್ಲಾದಷ್ಟು ಸಹಾಯ ಮಾಡುತ್ತಾನೆ. ನೀ-ವ್-ಸಾ-ಧೀ-ಸಿ, ಎಂದಾಗ ಎಲ್ಲರೂ ಒಟ್ಟಿಗೆ ನಾವ್-ಸಾ-ಧೀ-ಪೇ-ವು ಎಂದು ಎರಡು ಬೆರಳುಗಳಿಂದ ವಂದಿಸಿ ಹೇಳುತ್ತಾರೆ. ಇದಕ್ಕೆ ಪ್ರತಿಯಾಗಿ ಕಬ್‌ಮಾಸ್ಟರನು ಮೂರು ಬೆರಳುಗಳಿಂದ ಮರಿಗಳಿಗೆ ವಂದಿಸುತ್ತಾನೆ.

ಮರಿಗಳು ಎ. ಪಿ. ಒ ಭಾಗ ೨ (ಸ್ಕೌಟ್) ರಲ್ಲಿ ತಿಳಿಸಿದಂತೆ ಕಬ್‌ವಿಭಾಗದ ಮರಿಗಳು ೧೫ ಪದಕಗಳನ್ನು ಪಡೆಯುತ್ತಾರೆ.

ಮರಿಯು ಪ್ರಥಮ ಚರಣಕ್ಕೆ ಎರಡು ಪ್ರಾವೀಣತಾ ಪದಕಗಳಿಗೆ ಮೀರದೇ, ಮರಿಯು ದ್ವಿತೀಯ ಚರಣಕ್ಕೆ ಆರು ಪ್ರಾವೀಣತಾ ಪದಕಕ್ಕೆ ಮೀರದಂತೆ, ಮರಿಯು ತೃತೀಯ ಚರಣಕ್ಕೆ ಎಲ್ಲಾ ಪ್ರಾವೀಣತಾ ಪದಕಗಳನ್ನು ಸಂಪಾದಿಸಬಹುದು. ಪದಕ ಪಡೆಯಲು ಮರಿಗಳಿಗೆ ಅಭಿರುಚಿ ಮತ್ತು ಆಸಕ್ತಿಗೆ ತಕ್ಕಂತೆ ಅಕೇಲರು ಸಹಾಯ ಹಸ್ತ ಚಾಚುತ್ತಾರೆ.

ಕಬ್‌ಗಳ ವ್ಯಾವಹಾರಿಕ ತತ್ವ ಹಿಂಡಿನಲ್ಲಿ ಪರಸ್ಪರ ಸಹಾನುಭೂತಿ ಮತ್ತು ಪ್ರೀತಿ ವಾತ್ಸಲ್ಯಗಳು ಹಾಸುಹೊಕ್ಕಾಗಿರುತ್ತವೆ. ಇತರರಿಗಾಗಿ ತಾನು, ತನಗಾಗಿ ಇತರರು ಎಂಬುದು ಹಿಂಡಿನ ಕಾರ್ಯಕ್ರಮಗಳು. ಉಲ್ಲಾಸ ಹುರಿದುಂಬಿಸುವ ಹೊಸ ಕಾರ್ಯಕ್ರಮಗಳು ಜೀವನದ ಗೆಲುವಿಗೆ ಹಾದಿಯಾಗಿರುತ್ತದೆ. ಪ್ರತಿವಾರ ಮರಿಗಳು ಸಭೆ ಸೇರಿ ಉತ್ಸಾಹದಿಂದಿದ್ದು ಗೈರುಹಾಜರಾಗಲು ಇಚ್ಛೆಪಡುವುದಿಲ್ಲ.

ಕಬ್ ಮಾಸ್ಟರರು ನಿಷ್ಕಪಟವಾದ ಪ್ರೇಮ, ವಾತ್ಸಲ್ಯದಿಂದ ಕೂಡಿದ ಮಾರ್ಗದರ್ಶನವನ್ನು ಶ್ರದ್ಧೆ ಹಾಗೂ ಜಾಣ್ಮೆಯಿಂದ ಇರುವುದರಿಂದ ಅವರ ಬಗ್ಗೆ ಅಪಾರ ವಿಶ್ವಾಸವುಳ್ಳ ಮರಿಗಳಾಗಿರುತ್ತಾರೆ. ಮರಿಗಳು ವಿಶ್ವವ್ಯಾಪಿ ಸ್ಕೌಟ್ ಸಂಸ್ಥೆಯ ಭಾಗವಾಗಿ ಅವರದೇ ಆದ ವಿಶೇಷ ರೀತಿಯ ವಿಶ್ವಸೋದರತೆಯ ಸದಸ್ಯರೆಂದು ಸಾರುವ ಸಮವಸ್ತ್ರವಿದೆ. (ಎ.ಪಿ.ಆರ್.ಒ. ಭಾಗ-೨ - ಕಬ್ ವಿಭಾಗ)

ಕಾಡಿನ ಕಥೆಗಳು ಸಹಜವಾಗಿ ಕಾಡಿನ ಕುಣಿತಗಳಿಗೆ (ಆಟಗಳಿಗೆ) ದಾರಿಮಾಡಿ ಕೊಡುತ್ತವೆ. ಈ ಕಾಡು ಆಟಗಳು ಅವುಗಳಿಂದ ಕಲಿಯಬಹುದಾದ ಮೌಲ್ಯಗಳ ನಿಷ್ಠೆ ಮತ್ತು ಹಿಂದಿನ ಭಾವನೆಗಳನ್ನು ಒತ್ತಿ ಹೇಳುತ್ತವೆ. ಕಬ್ ಮಾಸ್ಟರರಿಗೆ ಅಕೇಲಾ ಎಂದು ಸಹಾಯಕ ಕಬ್ ಮಾಸ್ಟರುಗಳಿಗೆ ಬಾಲು ಭಗೀರ ಮುಂತಾದ ಪದಗಳ ಬಳಕೆ ಕಾಣುತ್ತೇವೆ. ಲಾರ್ಡ್ ಬೇಡನ್ ಪೊವೆಲ್‌ರವರು ೧೯೧೬ ರಲ್ಲಿ ಬರೆದ ಉಲ್ಫಾ ಕಬ್ ಹ್ಯಾಂಡ್ ಬುಕ್ ಪುಸ್ತಕವು ಮರಿಗಳ ಶಿಕ್ಷಣಕ್ಕೆ ಕೈಗನ್ನಡಿಯಾಗಿದೆ. ಕಬ್ ಮತ್ತು ಬುಲ್ ಬುಲ್‌ಗಳು ತಮ್ಮ ವಯೋಮಾನಕ್ಕೆ ತಕ್ಕಂತೆ ಯೋಗ್ಯವಾಗಿರಲು ಸಮರ್ಥರನ್ನಾಗಿ ಮಾಡುತ್ತವೆ. ಹೊಸ ಹೊಸ ಕೌಶಲ್ಯಗಳಲ್ಲಿ ಆಸಕ್ತಿ ಹುಟ್ಟಿಸುವುದು, ತಮ್ಮ ಬಗೆಗೆ ಚಿಂತಿಸುವಿಕೆ ಹಾಗೂ ಇತರರ ಬಗ್ಗೆ ಚಿಂತಿಸಲು ತಮ್ಮ ಅನುಭವಗಳನ್ನು ಯೋಜನೆಗಳನ್ನು ಹಮ್ಮಿಕೊಂಡು ಹಂಚಿಕೊಳ್ಳುತ್ತಾರೆ.

ಕಬ್ ಮತ್ತು ಬುಲ್ ಬುಲ್ ಮೇಳಗಳಲ್ಲಿನ ತಮ್ಮ ಸಭೆಗಳಲ್ಲಿ ಎಲ್ಲಾ ವಿಧವಾದ ಒಳ್ಳೆಯ ಚಟುವಟಿಕೆಗಳಲ್ಲಿ ಭಾಗವಹಿಸಿ, ಆಟ ಹಾಗೂ ಉತ್ತಮ ಪದಕಗಳಿಗಾಗಿ ಹೋರಾಟ ತಮ್ಮ ಕೌಶಲ್ಯಗಳ ತಯಾರಿಕೆ ಹಾಗೂ ಪ್ರದರ್ಶನ, ಗೀತ ಗಾಯನ ಅಭಿನಯ ಆಟಗಳಲ್ಲಿ ಭಾಗವಹಿಸುತ್ತಾರೆ. ತಮ್ಮಲ್ಲಿಯ ಬದಲಾವಣೆಗಳಿಗಾಗಿ ಹೊರ ಸಂಚಾರವನ್ನು ಪ್ಯಾಕ್ ಮತ್ತು ಫ್ಲಾಕ್‌ಗಳಲ್ಲಿನ ಶಿಬಿರಕ್ಕೆ ಸಾಗುತ್ತಾರೆ. ತಮ್ಮ ಭವಿಷ್ಯಕ್ಕಾಗಿ ಸುತ್ತ ಮುತ್ತಲಿನ ವಾತಾವರಣದ ಅಧ್ಯಯನಕ್ಕೆ ಸದಾಸಿದ್ಧರಾಗಿ ಮತ್ತೊಬ್ಬರಿಗೆ ಉಪಕಾರಿಗಳಾಗಲು ಹಾತೊರೆಯುತ್ತಾರೆ. ತಮ್ಮ ಭಾಷೆಗೆ ತಕ್ಕಂತೆ ದೇವರಿಗೆ ಮತ್ತು ಕರ್ತವ್ಯ ಪಾಲನೆಗೆ ಉಪಕಾರಿಗಳಾಗುತ್ತಾರೆ. ಇದಕ್ಕಾಗಿ ಹೊರ ಸಂಚಾರದ ಅನುಭವ ಸಾಂಘಿಕವಾಗಿ ಭವಿಷ್ಯದಲ್ಲಿ ಸ್ಕೌಟ್ ಗೈಡ್‌ಗಳಾಗಲು ಸಿದ್ಧರಾಗುತ್ತಾರೆ.

ಕಬ್, ಬುಲ್ ಬುಲ್ ಉತ್ಸವದಲ್ಲಿ ಎಲ್ಲರೂ ಸೇರಲು ಒಬ್ಬರು ಮತ್ತೊಬ್ಬರಿಗೆ ಅಭಿನಂದಿಸಲು, ಒಬ್ಬರು ಮತ್ತೊಬ್ಬರಿಗೆ ತಿಳಿಯಲು ಹಾಗೂ ಹಾಡಲು, ಸಂತೋಷದಿಂದ ಆಡಿ ನಲಿದಾಡಲು, ಸಂಭ್ರಮದ ಉತ್ಸವವಾಗಿದೆ. ಈ ನಮ್ಮ ಚಿಕ್ಕಮಗಳೂರಿನಲ್ಲಿ ಈ ಉತ್ಸವದ ಘೋಷವಾಕ್ಯ ತಿಳಿ-ಬೆಳಿ-ಸವಿ-ನಿರಂತರ ಆಗಿರುತ್ತದೆ.

# ಸ್ಕೌಟ್ಸ್ ಮತ್ತು ಗೈಡ್ಸ್

*ಕನ್ನಡ ಕಸ್ತೂರಿ -೬*

*ಕೃಪೆ : ಪಠ್ಯ ಪುಸ್ತಕ ನಿರ್ದೇಶನಾಲಯ, ಬೆಂಗಳೂರು*

**ಶಾಲಾ** ವಾರ್ಷಿಕೋತ್ಸವದ ಪೂರ್ವ ಸಿದ್ಧತೆ, ಏನು ಡಗರ! ಸಂಭ್ರಮ! ಮಕ್ಕಳು ತಾಲೀಮು ನಡೆಸುತ್ತಿದ್ದಾರೆ. ಂದೆಡೆ ರಾಜುವಿನ ಸಂಗಡಿಗರು ನಾಟಕ ಅಭ್ಯಾಸದಲ್ಲಿ ೂಡಗಿದ್ದಾರೆ. ಮತ್ತೊಂದೆಡೆ ಶಬನಾ ವೃಂದದವರು ೃತ್ಯಭ್ಯಾಸದಲ್ಲಿ ಮಗ್ನರಾಗಿದ್ದಾರೆ. ಮಗದೊಂದೆಡೆ ಸುಮಾಳ ಂಪಿನವರು ಹಾಡೊಂದನ್ನು ರಾಗವಾಗಿ ಹಾಡುತ್ತಿದ್ದಾರೆ.

'ಏನಿದು ಇಷ್ಟು ಗಲಾಟೆ?' ಎಂದು ಕೇಳುತ್ತಾ ತರಗತಿಗೆ ಂದ ಗುರುಗಳಿಗೆ ಎಲ್ಲರೂ ನಾಳೆಯ ವಾರ್ಷಿಕೋತ್ಸವಕ್ಕೆ ದ್ಧತೆ ಮಾಡಿಕೊಳ್ಳುತ್ತಿದ್ದೇವೆ ಎಂದರು. 'ಹಾಗೋ, ಆಗಲಿ ಯಾರಿ ನಡೆಸಿ. 'ಅಂದ ಹಾಗೆ ಸ್ವಾಗತ ಮತ್ತು ಇತರ ಲಸಗಳನ್ನು ನೋಡಿಕೊಳ್ಳುವವರು ಯಾರು?' ಗುರುಗಳು ಶ್ನಿಸಿದರು. ಕೂಡಲೇ ಅಂತೋಣಿ ಎದ್ದು ನಿಂತು'ನಾವು ುರುಗಳೇ, ಸ್ಕೌಟ್ಸ್ ಮತ್ತು ಗೈಡ್ಸ್ ದಳದವರು'. ಸಂತೋಷದಿಂದ ುರುಗಳು 'ಚೆನ್ನಾಗಿ ಸಜ್ಜುಮಾಡಿಕೊಳ್ಳಿ!' ಒಕ್ಕೊರಲಿನಿಂದ ಆಯಿತು ಗುರುಗಳೇ' ಎಂದರು.

ವಾರ್ಷಿಕೋತ್ಸವದ ಕಾರ್ಯಕ್ರಮ ಇನ್ನೇನು ಸದ್ಯದಲ್ಲೇ ಾರಂಭವಾಗಲಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ದಳದವರು ತಮ್ಮ ಮ್ಮ ಸಮವಸ್ತ್ರದಲ್ಲಿದ್ದಾರೆ. ಬರುವವರನ್ನು ಸ್ವಾಗತಿಸಿ, ನಿಗದಿತ ಳಗಳಲ್ಲಿ ಕುಳ್ಳಿರಿಸುತ್ತಿದ್ದಾರೆ.

ಜಯಂತ ಮತ್ತು ಅವನ ತಂದೆ-ತಾಯಿ ವಾರ್ಷಿಕೋತ್ಸವ ೋಡಲು ಬಂದರು. ಗೈಡ್-ಶಾಲಿನಿ ಅವರಲ್ಲಿಗೆ ಹೋಗಿ ಾರವದಿಂದ ಸ್ವಾಗತಿಸಿದಳು. ಉಪಚರಿಸಿ ಕುಳ್ಳಿರಿಸಿದಳು. ಅವಳ ನಯ-ವಿನಯಕ್ಕೆ ಅವರು ಮಾರುಹೋದರು. ಬೆರಗುಗಣ್ಣುಗಳಿಂದ ಅವಳನ್ನು ನೋಡಿದರು. ಮೆಚ್ಚುಗೆಯಿಂದ 'ನಾವು ಜಯಂತನ ತಂದೆ-ತಾಯಿ. ನೀನೇನು ಓದುತ್ತಿದ್ದೇಯ? ಎಂದರು. 'ನಾನು ಆರನೆಯ ತರಗತಿ'. ಜಯಂತ ತನ್ನ ತಂಗಿ ಅಂಬಿಕಾಳನ್ನು ಪರಿಚಯಿಸಿದ. ಶಾಲಿನಿ ಲಗುಬಗೆಯಿಂದ 'ಇನ್ನೇನು ಕಾರ್ಯಕ್ರಮ ಪ್ರಾರಂಭವಾಗುತ್ತೆ. ಜನ ಬರುತ್ತಿದ್ದಾರೆ. ಅವರನ್ನು ಸ್ವಾಗತಿಸಬೇಕು' ಎಂದು ನಗು ಮೊಗದಿಂದ ಹೊರಟಳು.

ಶಾಲಿನಿಯಂತೆಯೇ ಸೊಂಟ ಪಟ್ಟಿ, ತಲೆಗೆ ಕಪ್ಪು ಟೇಪು, ಕಂಠವಸ್ತ್ರ ಹಾಗೂ ನೀಲಿ ಸಮವಸ್ತ್ರ ಧರಿಸಿ ಅತ್ತಿಂದಿತ್ತ ಓಡಾಡುವ ಹುಡುಗಿಯರು ಎಲ್ಲರ ಗಮನ ಸೆಳೆದರು. ಅದನ್ನು ಕಂಡ ಜಯಂತನ ತಾಯಿ 'ಬಂದವರನ್ನು ಎಷ್ಟು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ....... ಆ ಬಾಲಕಿಯರು' ಎಂದು ಕೊಂಡರು.

'ಆಗೋ! ಅಲ್ಲಿ ನೋಡು, ನೀಲಿ ನಿಕ್ಕರ್, ಬೂದು ಬಣ್ಣದ ಅಂಗಿ, ನೀಲಿ ಟೋಪಿ, ಕಪ್ಪು ಕಾಲುಚೀಲ, ಬೂಟು ಹಾಕಿರುವ ಹುಡುಗರು ಶಿಸ್ತಿನ ಸಿಪಾಯಿಗಳಂತೆ ಕಾಣುತ್ತಿದ್ದಾರೆ', ಎಂದು ಜಯಂತನ ತಂದೆ ತೋರಿಸಿದರು. ಅಪ್ಪ, ಇವರು ಸ್ಕೌಟ್ಸ್ ದಳದವರು. ನೀಲಿ ಫ್ರಾಕಿನವರು ಗೈಡ್ಸ್ ದಳದವರು. ಇವರೆಲ್ಲರೂ ಸೇವಾ ಸೈನಿಕರು. 'ನನಗು ಸ್ಕೌಟ್ಸ್ ಮತ್ತು ಗೈಡ್ಸ್ ಸೇರಬೇಕೆಂಬ ಆಸೆ' ಎಂದ ಜಯಂತ. ತಂದೆ 'ಆಗಲಿ, ನಿಮ್ಮ ಮುಖ್ಯಗುರುಗಳನ್ನು ವಿಚಾರಿಸೋಣ'. 'ನನ್ನನ್ನೂ ಸೇರಿಸಮ್ಮ' ಎಂದು ಅಂಬಿಕಾ ಮುದ್ದಾಗಿ ಹೇಳಿದಳು. 'ಆಗಲಿ, ನಿನ್ನನ್ನೂ ಸೇರಿಸುತ್ತೇನೆ' ಎಂದರು.

ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳ ಸಮವಸ್ತ್ರ, ಶಿಸ್ತು,

ಚಟುವಟಿಕೆ, ಕೆಲಸದ ರೀತಿ-ನೀತಿ ಎಲ್ಲರಿಗೂ ಖುಷಿ ಕೊಟ್ಟಿತು. ತಮ್ಮ ಮಕ್ಕಳನ್ನು ಅದಕ್ಕೆ ಸೇರಿಸಬೇಕೆಂಬ ಮನಸ್ಸಾಯಿತು.

ಮರುದಿನ ಜಯಂತನ ತಂದೆ-ತಾಯಿಯರು ಮುಖ್ಯ ಗುರುಗಳ ಬಳಿಬಂದರು. ವಿನಯದಿಂದ ವಂದಿಸಿದರು. 'ಸ್ಕೌಟ್ಸ್-ಗೈಡ್ಸ್ ಬಗೆಗೆ ಮಾಹಿತಿ ಕೊಡಿ. ನಮ್ಮ ಮಕ್ಕಳನ್ನು ಸೇರಿಸಬೇಕೆಂದಿದ್ದೇವೆ' ಎಂದರು. ಸಂತೋಷದಿಂದ ಸ್ಕೌಟ್ಸ್-ಗೈಡ್ಸ್ ಎಂಬುದು ಅಂತಾರಾಷ್ಟ್ರೀಯ ಮಟ್ಟದ ಸೇವಾಸಂಸ್ಥೆ. ಇದರ ಜನಕ ಬೇಡನ್ ಪೊವೆಲ್. ೧೯೦೭ರಲ್ಲಿ ಲಂಡನ್ನಿನ ಬ್ರೌನ್ಸಿ ದ್ವೀಪದಲ್ಲಿ ಸ್ಕೌಟ್ಸ್ ಪ್ರಾರಂಭವಾಯಿತು ಎಂದು ಗುರುಗಳು ವಿವರಿಸಿದರು.

ಸ್ಕೌಟ್ಸ್ ಭಾರತದಲ್ಲಿ ಯಾವಾಗ? ಎಲ್ಲಿ ಪ್ರಾರಂಭವಾಯಿತು? ಎಂದು ಪ್ರಶ್ನಿಸಿದರು. ನೌಕಾದಳದ ಕ್ಯಾಪ್ಟನ್ ಆಗಿದ್ದ ಟಿ. ಎಸ್. ಬೇಕರ್ ಅವರ ಸಹಕಾರದಿಂದ ೧೯೦೯ರಲ್ಲಿ ಸ್ಕೌಟ್ಸ್ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಇದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯ ಎಂದರು.

ನೀತಿ, ಆದರ್ಶ, ಶಿಸ್ತು, ಸಹಬಾಳ್ವೆ, ಉತ್ತಮ ಹವ್ಯಾಸ ಮುಂತಾದ ಗುಣಗಳನ್ನು ಮಕ್ಕಳು ಇಲ್ಲಿ ಬೆಳೆಸಿಕೊಳ್ಳುತ್ತಾರೆ. 'ದೇವರ ಸೇವೆಗೆ, ದೇಶ ಸೇವೆಗೆ, ಪರೋಪಕಾರಕ್ಕೆ, ಸದಾ ಸಿದ್ಧರಾಗಿರುತ್ತೇವೆ' ಎಂಬ ಪ್ರತಿಜ್ಞಾದ್ಯೇಯ ವಾಕ್ಯದಂತೆ ನಡೆಯುತ್ತಾರೆ. ಮಾನಸಿಕ, ದೈಹಿಕ ಬಲವನ್ನು ಹೆಚ್ಚಿಸಿಕೊಳ್ಳುತ್ತಾರೆ. ರಾಷ್ಟ್ರಭಕ್ತಿ, ವಿಶ್ವಪ್ರೇಮ ಮುಂತಾದ ಉದಾತ್ತಗುಣಗಳನ್ನು ಮೈಗೂಡಿಸಿಕೊಳ್ಳುವರು.

ಪ್ರಥಮಚಿಕಿತ್ಸೆ, ಸ್ವಯಂಸೇವಕತನ, ರಕ್ಷಣೆಗೆ ಸಂಬಂಧಿಸಿದಂತಹ ತರಬೇತಿ ಕೊಡಲಾಗುತ್ತದೆ. ವಿಶ್ವ ಭ್ರಾತೃತ್ವ ಸಾಧಿಸಲು ಮಾನವರೆಲ್ಲಾ ಒಂದೇ ಎಂದು ಪ್ರತಿಬಿಂಬಿಸಲು ಜಿಲ್ಲೆ, ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಜಾಂಬೂರಿಗಳು ನಡೆಯುತ್ತವೆ. ನಿಪುಣ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಜ್ಯ-ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿಗಳಿವೆ. ಈ ವಿದ್ಯಾರ್ಥಿಗಳ ಉನ್ನತ ಶಿಕ್ಷಣಕ್ಕಾಗಿ ಸ್ಥಾನಗಳನ್ನು ಕಾಯ್ದಿರಿಸಿದೆ ಎಂದು ವಿವರಿಸಿದರು.

ವಾರ್ಷಿಕೋತ್ಸವ ಕಾರ್ಯಕ್ರಮಗಳನ್ನು ಯಶಸ್ವಿ ಗೊಳಿಸುವುದರಲ್ಲಿ ಸ್ಕೌಟ್ಸ್-ಗೈಡ್ಸ್ ಮಕ್ಕಳ ಪಾತ್ರ ಮತ್ತು ಹಿರಿತನವನ್ನು ಪ್ರಶಂಸಿದರು. ತಮ್ಮ ಮಕ್ಕಳನ್ನು ಸ್ಕೌಟ್ಸ್-ಗೈಡ್ಸ್‌ಗೆ ಸೇರಿಕೊಳ್ಳಬೇಕೆಂದು ವಿನಂತಿಸಿದರು.

'ಜಯಂತನನ್ನು ಸ್ಕೌಟಿಗೆ ಸೇರಿಸಿಕೊಳ್ಳುತ್ತೇವೆ. ಅಂಬಿಕಾಳನ್ನು ಗೈಡ್ಸ್‌ಗೆ ಸೇರಿಸಲು ಬರುವಂತಿಲ್ಲ. ಅವಳನ್ನು 'ಬುಲ್‌ಬುಲ್' ವಿಭಾಗಕ್ಕೆ ಸೇರಿಕೊಳ್ಳುತ್ತೇವೆ' ಎಂದರು. ಅಷ್ಟರಲ್ಲಿ ಘಂಟೆ ಭಾರಿಸಿತು. 'ನಾನು ತರಬೇತಿಗೆ ಹೋಗಬೇಕು ಇನ್ನೊಮ್ಮೆ ಬನ್ನಿ' ಎಂದು ಗುರುಗಳು ಹೊರಟರು.

ಅಂಬಿಕಾಳನ್ನು ಏಕೆ ಗೈಡ್ಸ್‌ಗೆ ಸೇರಿಸಿಕೊಳ್ಳಲು ಬರುವುದಿಲ್ಲ? ಎಂಬ ಪ್ರಶ್ನೆ ನಿಗೂಢವಾಯಿತು. ಆಟದ ಸಲಕರಣೆಗಳನ್ನು ಹೊತ್ತು ಮೈದಾನದ ಕಡೆಗೆ ಸಾಗುತ್ತಿದ್ದ ಅಂತೋಣಿ ಎದುರಾದ. 'ಏಕೆ ಬೇಸರದಲ್ಲಿದ್ದಿರಿ? ಜಯಂತನನ್ನು ಸ್ಕೌಟಿಗೆ ಸೇರಿಸಿಕೊಳ್ಳಲಿಲ್ಲವೇ?' ಎಂದು ಕೇಳಿದ.

ಅವನನ್ನು ಸೇರಿಕೊಂಡರು. ಆದರೆ ಅಂಬಿಕಾಳನ್ನು ಗೈಡ್ಸ್‌ಗೆ ಸೇರಿಕೊಳ್ಳಲಿಲ್ಲ. ಅದೇನೋ 'ಬುಲ್-ಬುಲ್' ಅಂತೆ. ಅದಕ್ಕೆ ಸೇರಿಸಿಕೊಂಡರು ಎಂದರು ಅಂಬಿಕಾಳ ತಾಯಿ.

ಅಷ್ಟಕ್ಕೆ, ಬೇಸರಗೊಂಡಿದ್ದಿರಾ? ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಮೂರು ವಿಭಾಗಗಳಿವೆ. ಆರರಿಂದ ಹತ್ತು ವರ್ಷದೊಳಗಿನ ಬಾಲಕರನ್ನು 'ಕಬ್' ಎಂದು, ಬಾಲಕಿಯರನ್ನು 'ಬುಲ್-ಬುಲ್' ಎಂದು ಕರೆಯುತ್ತಾರೆ. ಹತ್ತರಿಂದ ಹದಿನಾರು ವರ್ಷದೊಳಗಿನ ಬಾಲಕರನ್ನು 'ಸ್ಕೌಟ್ಸ್' ಎಂದು ಬಾಲಕಿಯರನ್ನು 'ಗೈಡ್ಸ್' ಎಂದು ಕರೆಯುತ್ತಾರೆ. ಹದಿನಾರರಿಂದ ಇಪ್ಪತ್ತೈದು ವರ್ಷದೊಳಗಿನ ಯುವಕರನ್ನು 'ರೋವರ್ಸ್' ಎಂದು ಯುವತಿಯರನ್ನು 'ರೇಜರ್ಸ್' ಎಂದು ಕರೆಯುತ್ತಾರೆ.

ತಮ್ಮ ಮಗಳಿಗೆ ಎಂಟುವರ್ಷ ಆದುದರಿಂದ ಬುಲ್-ಬುಲ್‌ಗೆ ಸೇರಿಕೊಂಡಿದ್ದಾರೆಂದು ಸಮಾಧಾನಗೊಂಡರು. ಉದಾತ್ತ ಸಂಸ್ಕಾರ ನೀಡುವ ಸ್ಕೌಟ್ಸ್-ಗೈಡ್ಸ್‌ಗೆ ತಮ್ಮ ಮಕ್ಕಳನ್ನು ಸೇರಿಸಿಕೊಂಡಿದಕ್ಕೆ ಸಂತೋಷ ಮತ್ತು ಹೆಮ್ಮೆ ಪಟ್ಟುಕೊಂಡರು.



# "ಸ್ಕೌಟ್ಸ್" ಅನುಭವದ ಮೂಸೆಯಲ್ಲಿ

ಎಂ. ಎನ್. ಷಡಕ್ಷರಿ.

ಆಗಷ್ಟೇ ಅಂದರೆ ಕೇವಲ ಒಂದು ವರ್ಷದ ಹಿಂದೆ ನಾನು ದಳವನ್ನು ಪ್ರಾರಂಭಿಸಿದ್ದೆ ಬಾಂಬೆ ರಾಷ್ಟ್ರೀಯ ಜಾಂಬೂರಿಗೆ ೧೩ ಬಾಲಕರನ್ನು ಕರೆದುಕೊಂಡು ಸಂತೋಷದಿಂದ ಹೊರಟೆ. ಮಾರ್ಗಮಧ್ಯದ ಮೀರಜ್‌ನಲ್ಲಿ ನಾವು ರೈಲು ಬದಲಾಯಿಸಬೇಕಾಗಿದ್ದಿತು. ಅಂದರೆ ಬಾಂಬೆಗೆ ಹೋಗುವ ರೈಲು ಬರುವುದು ಬೆಳಗಿನ ಜಾವ ಅಂತ ತಿಳಿಯಿತು. ಯಾವ ಕಡೆಗೆ, ಎಷ್ಟು ದೂರಕ್ಕೆ ದೃಷ್ಟಿ ಹಾಯಿಸಿದರು ಬರೀ ಕತ್ತಲು. ಏನು ಮಾಡುವುದು ತೋಚಲಿಲ್ಲ. ಸುಮ್ಮನೆ ಎಲ್ಲರು ಅಲ್ಲೇ ಪ್ಲಾಟ್‌ಫಾರಂ ಮೇಲೆ ಸಾಲಾಗಿ ಮಲಗಿದೆವು. ಸರಿ ಸುಮಾರು ೨.೩೦ರವೇಳೆಗೆ ಒಂದು ರೈಲು ಬಂತು. ಆತುರದಿಂದ ಎದ್ದು ಓಡುತ್ತಾ ಒಂದೇ ಉಸುರಿಗೆ ನಾವೆಲ್ಲರೂ ಹತ್ತಿಕೊಂಡೆವು. ಆದರೆ ಅದು ನಾವು ಹೋಗಬೇಕಾದ ರೈಲಲ್ಲವೆಂದು ತಿಳಿಯಿತು. ಎಲ್ಲರೂ ಇಳಿದೆವು. ಹಾಗೇ ಸ್ವಲ್ಪ ಕಾಲ ಕಳೆಯಿತು. ಏಕೋ ಅನುಮಾನ ಬಂದು ಹುಡುಗರನ್ನು ಎಣಿಸಿದೆ. ನಮ್ಮೊಡನೆ ಬಂದಿದ್ದ ಒಬ್ಬ ಬಾಲಕ ನಾಪತ್ತೆ. ನನ್ನ ಜಂಘಾಬಲವೇ ಉಡುಗಿಹೋದ ಹಾಗಾಯಿತು. ಅವನು ಆ ರೈಲಿನಲ್ಲಿ ಹೋಗಿಬಿಟ್ಟಿದ್ದಾನೆ.!

೧೯೬೯ರಲ್ಲಿ ಕೆ. ಬಿ. ನಂಜಪ್ಪನವರ ನೇತೃತ್ವದ್ಧಲಿ ನಾನು 'ಸ್ಕೌಟ್ಸ್ ಮಾಸ್ಟರ್' ತರಬೇತಿಯನ್ನು ಪಡೆದು ಅಂದಿನಿಂದ ಈ ಹೊತ್ತಿನ ತನಕ ರಾಬಿನ್ ಸ್ಕೌಟ್ಸ್ ಮತ್ತು ಕಿಪ್ಲಿಂಗ್ ದಳಗಳ ನಾಯಕತ್ವವನ್ನು ವಹಿಸುತ್ತಿದ್ದೇನೆ. ಮಕ್ಕಳ ಒಡನಾಟ ತುಂಬಾ ಚೆನ್ನಾಗಿರುತ್ತದೆ. ನಿಜ, ಆದರೆ ಅವರ ಜವಾಬ್ದಾರಿ ಬಹಳ ಗುರುತರವಾದದ್ದು ಮಕ್ಕಳೊಂದಿಗೆ ನಾನು ಕಳೆದ ಆ ಕ್ಷಣಗಳಲ್ಲಿ ಇಂತಹ ಹತ್ತುಹಲವು ಘಟನೆಗಳು, ಸನ್ನಿವೇಷ, ಸಂದರ್ಭಗಳು ಒದಗಿವೆ. ಅವು ವಿವಿಧ ರೀತಿಯ ಅನುಭೂತಿಗಳನ್ನು ನೀಡುತ್ತಾ ನನ್ನ ಚಿಂತನೆಯನ್ನು ಕೆದಕಿ ಬದುಕಿನ ಆಳ ವಿಸ್ತಾರಗಳನ್ನು ಹೆಚ್ಚಿಸಿವೆ. ಆ ಕ್ಷಣಕ್ಕೆ ಅದು ಒಂದು ರೀತಿ ಕಂಡರೆ ಈಗ ಮತ್ತೆ ಮತ್ತೆ ಅವೆಲ್ಲವನ್ನು ಮೆಲುಕುಹಾಕುವಾಗ ಅಷ್ಟೇ ತಾಜಾತನದಿಂದ ಮನಃಪಟಲದಲ್ಲಿ ಮೂಡುತ್ತಾ ಅವೇ ಆನಂದದ ಬುಗ್ಗೆಗಳಾಗಿರುತ್ತದೆ. ಅವುಗಳಲ್ಲಿ ಕೆಲವನ್ನು ಆಸಕ್ತರೊಂದಿಗೆ ಹಂಚಿಕೊಳ್ಳುವುದರಲ್ಲಿ ನನಗೆ ಒಂದು ಬಗೆಯ ಆನಂದವಿದೆ.

ಇನ್ನೊಮ್ಮೆ ಸುಮಾರು ೭೦ರ ದಶಕದಲ್ಲಿ ೩ದಿನಗಳ ಶಿಬಿರಕ್ಕಾಗಿ ಮಕ್ಕಳನ್ನು ಕರೆದುಕೊಂಡು ಮುತ್ತೋಡಿ ಅಭಯಾರಣ್ಯಕ್ಕೆ ಹೋಗಿದ್ದೆ. ಆಗ ಈಗಿನ ಹಾಗೆ ನೇಚರ್ ಕ್ಯಾಂಪ್ ಇರಲಿಲ್ಲವೆನ್ನಿ. ಬಸ್‌ಗಳು ಶಿರವಾಸೆ ತಿರುವಿನ ತನಕ ಮಾತ್ರ ಹೋಗುತ್ತಿದ್ದವು. ಅಲ್ಲಿಂದ ಮುಂದಕ್ಕೆ ನಡೆದುಕೊಂಡೇ ಮುತ್ತೋಡಿಗೆ ಹೋಗಬೇಕಾಗಿತ್ತು. ಉತ್ಸಾಹದಿಂದೇನೋ ಹೊರಟಿದ್ದೆವು. ಆದರೆ ಮಕ್ಕಳನ್ನೆಲ್ಲಾ ಕರೆದುಕೊಂಡು ಎಲ್ಲರಿಗೂ ಮೂರು ದಿನಕ್ಕಾಗುವಷ್ಟು ಸಾಮಾನು, ಸರಂಜಾಮುಗಳನ್ನು ತೆಗೆದುಕೊಂಡು ನಾವು ಬಸ್ ಇಳಿದಾಗ ಆಗಲೇ ಸಂಜೆಯಾಗಿತ್ತು. ಏನು ಮಾಡೋದು? ಆ ಹೊರೆಗಳನ್ನು ಹೊತ್ತು ಅಲ್ಲಿಂದ ನಡೆಯಲಾರಂಭಿಸಿದೆವು.

ಮುಂಚೆ ಹೋಗಿ ವ್ಯವಸ್ಥೆ ಮಾಡೋಣವೆಂದು ಅಡುಗೆಯವನ ಜತೆಯಲ್ಲಿ ನಾನು ಜೋರಾಗಿ ಹೆಜ್ಜೆ ಹಾಕಿದೆ. ಅಡುಗೆಯವನು ನನಗೆ ದಾರಿ ಗೊತ್ತೆಂದು ಹೇಳಿಕೊಂಡು ಕತ್ತಲಲ್ಲಿ ಸುಮಾರು ದೂರ ಕ್ರಮಿಸಿದೆವು. ಎಷ್ಟು ದೂರ ಹೋದರೂ ನಮ್ಮ ಕ್ಯಾಂಪ್ ಸಿಗಲಿಲ್ಲ. ನಿರ್ಜನ ಅರಣ್ಯ ಬೇರೆ. ಗಾಬರಿ ಅನುಮಾನಗಳೆರಡೂ ಶುರುವಾಯಿತು. ಅವನನ್ನು ವಾಪಸ್ ಕರೆದುಕೊಂಡು ಹೊರಟೆ. ಆಗಲೇ ಶಿಬಿರವನ್ನು ತಲುಪಿದ್ದ ನಮ್ಮ

ವಿದ್ಯಾರ್ಥಿಗಳೇ ಲಾಟೀನುಗಳನ್ನು ಹಿಡಿದುಕೊಂಡು ನಮ್ಮಿಬ್ಬರನ್ನು ಹುಡುಕುತ್ತಾ ಬಂದರು. ಹಿಂಬಾಲಿಸಿದವರೇ ದಾರಿ ತೋರಿಸಿದ ವಿಚಿತ್ರ ಪ್ರಸಂಗ ಒದಗಿದರೆ ಸ್ಕೌಟ್ ಮಾಸ್ಟರನನ್ನೇ ಮಕ್ಕಳು ಹುಡುಕುವಂತಹ ಅನಿವಾರ್ಯತೆ ಸೃಸ್ಟಿಯಾಗಿದ್ದನ್ನು ಮರೆಯುವಂತಿಲ್ಲ.

ಅದೇ ಕ್ಯಾಂಪ್‌ನಲ್ಲಿ ಕಾಡು ಪ್ರಾಣಿಗಳನ್ನು ನೋಡುವುದಕ್ಕಾಗಿ ವಾಚರ್ ಒಬ್ಬರ ಮಾರ್ಗದರ್ಶನದಲ್ಲಿ ಎಲ್ಲರೂ ಹೊರಟೆವು. ಸಾಕಷ್ಟು ದೂರ ಹೋದಮೇಲೆ ಒಂದು ಸ್ಥಳದಲ್ಲಿ ಸಾಮಾನ್ಯವಾಗಿ ಕಾಡುಕೋಣಗಳಿರಬಹುದೆಂದು (ಆದಿನಗಳಲ್ಲಿ ಬಹಳಷ್ಟು ಕಾಡುಕೋಣಗಳಿದ್ದವು) ಊಹಿಸಿ ಅಲ್ಲಿಂದ ಸ್ವಲ್ಪ ದೂರದಲ್ಲೇ ಮಕ್ಕಳನ್ನು ನಿಲ್ಲಿಸಿ, ಪರೀಕ್ಷಿಸಲು ಮುಂದೆ ಹೋದೆವು. ನಾವೊಂದು ೧೦೦ಗಜ ಹೋಗಿರಬಹುದು. ಹುಡುಗರು ಭಯಭೀತರಾಗಿ ಜೋರಾಗಿ ಕೂಗುತ್ತಾ ಚಲ್ಲಾಪಿಲ್ಲಿಯಾಗಿ ಓಡುತ್ತಾ ಬಂದರು. ದಟ್ಟಡವಿ ಏನಾಯಿತೋ? ಎಂದು ನೋಡಿದರೆ ನಾನು ಮಕ್ಕಳನ್ನು ನಿಲ್ಲಿಸಿದ್ದ ಜಾಗಕ್ಕೆ ಒಂದು ಹಿಂಡು ಕಾಡುಕೋಣಗಳು ಬಂದು ಸಂದರ್ಶನ ನೀಡಿದ್ದವು!.

ಸ್ಕೌಟ್ ಮಾಸ್ಟರ್ ಎನ್ನಿಸಿದ ಮೇಲೆ ಅವನಿಗೆ ಧೈರ್ಯ ಮತ್ತು ಸಮಯ ಪ್ರಜ್ಞೆಗಳು ಮುಖ್ಯವಾಗಿರಬೇಕೆಂದು ನನಗನ್ನಿಸುತ್ತದೆ. ಏಕೆಂದರೆ ಪ್ರತಿಯೊಂದು ಹಂತದಲ್ಲೂ ನಮ್ಮ ಪರೀಕ್ಷೆಯಾಗುತ್ತಿರುತ್ತದೆ. ಆಕಸ್ಮಿಕ ಮತ್ತು ಅನಿಶ್ಚಿತ ಅನುಭವಗಳು ಒದಗಿ ಬಿಡುತ್ತವೆ ಹಲವು ಬಾರಿ. ನಾವೊಂದು ಸಾರಿ ಕಲ್ಲತ್ತಿಗಿರಿಗೆ ಶಿಬಿರಕ್ಕೆಂದು ಹೋಗಿದ್ದವು. ನೀರನ್ನು ಕಂಡು ಎಲ್ಲರು ಸಾಕಷ್ಟು ಖುಷಿಯಾಗಿದ್ದರು. ಜಲಪಾತದ ಮೇಲಿರುವ ಜಾಗದಲ್ಲಿ ಮಕ್ಕಳಿಗೆ ಸ್ನಾನಮಾಡಲು ಬಿಟ್ಟೆ. ಅವರ ಆನಂದಕ್ಕೆ ಪಾರವೇ ಇಲ್ಲ. ಕೇಕೇ ಹಾಕುತ್ತಾ ಅವರು ನೀರಿಗಿಳಿಯುವ ದೃಶ್ಯವೇ ಮನೋಜ್ಞ. ಇದ್ದಕ್ಕಿದ್ದಂತೆ ಒಂದೇ ಬಾರಿಗೆ ಆ ನಗು ಕೇಕೆಗಳೆಲ್ಲಾ ನಿಂತಿತು. ಆಶ್ಚರ್ಯದಿಂದ ನೋಡುವ ಹೊತ್ತಿಗೆ ಇಬ್ಬರು ಬಾಲಕರು ಓಡುತ್ತಾ ಬಂದರು ಆ ನೀರಿನಲ್ಲಿ ಯಾರೋ ಒಡೆದು ಹಾಕಿದ್ದೊಂದು ಬಾಟಲಿಯನ್ನು ತುಳಿದು ಒಬ್ಬನಿಗೆ ಪೆಟ್ಟಾಗಿದೆ. ಅಲ್ಲಿಗೆ ಧಾವಿಸಿದರೆ ಅವನ ಕಾಲಿನಿಂದ ಧಾರಾಕಾರವಾಗಿ ರಕ್ತ ಹರಿಯುತ್ತಿದೆ. ಏನು ಮಾಡಿದರೂ ನಿಲ್ಲುತ್ತಿಲ್ಲ! ಕೂಡಲೇ ಯಾರದೋ ವಾಹನದಲ್ಲಿ ಅವನನ್ನು ಕರೆದುಕೊಂಡು ಸಮೀಪದ ಲಿಂಗದಹಳ್ಳಿಗೆ ಹೋಗಿ ಅಲ್ಲಿ ಅವನಿಗೆ ಸೂಕ್ತ ಚಿಕಿತ್ಸೆ ಕೊಡಿಸುವ ಹೊತ್ತಿಗೆ ದೇವರೇ ಗತಿ. ಯಥಾ ಪ್ರಕಾರ ಸಾಯಂಕಾಲದ ಶಿಬಿರಾಗ್ನಿ ಕುಣಿತಕ್ಕೆ ಪೆಟ್ಟಾಗಿದ್ದ ಆ ಹುಡುಗ ತಯಾರಾಗಿದ್ದಾನೆ! ಆ ಕ್ಷಣಕ್ಕೆ ನಗಬೇಕೋ? ಅಳಬೇಕೋ? ಒಂದೂ ತಿಳಿಯಲಿಲ್ಲ.

ಮತ್ತೊಂದು ಸಾರಿ ಮುತ್ತೋಡಿ ಕಾಡಿಗೆ ಹೋಗುತ್ತಿದ್ದೆವು. ಸಂಜೆ ೪ಗಂಟೆಗೆ ಮಕ್ಕಳನ್ನೆಲ್ಲಾ ಕರೆದು ಅವರನ್ನು ೨ಗುಂಪುಗಳಾಗಿ ವಿಂಗಡಿಸಿ ಬಯಲು ಕ್ರೀಡೆಗೆ (ವೈಡ್ ಗೇಮ್) ಕೊಡಬೇಕಾದ ಸೂಚನೆಗಳನ್ನೆಲ್ಲಾ ಕೊಟ್ಟು ಕಳಿಸಿದೆ. ಆ ಆಟದ ನಿಯಮದಂತೆ ಒಂದು ಗುಂಪು ಮೊದಲು ೧೦ನಿಮಿಷ ಮುಂಚೆ ಹೋಗಿ ಅವಿತಿಟ್ಟುಕೊಳ್ಳಬೇಕು. ನಂತರ ಹೊರಟ ೨ನೆಯ ಗುಂಪು ಅವರನ್ನು ಹುಡುಕಬೇಕು, ಸುಮಾರು ೫ಗಂಟೆಯ ಹೊತ್ತಿಗೆ ಆ ಆಟ ಮುಗಿಯಿತು. ಸ್ವಲ್ಪ ಹೊತ್ತಿನ ನಂತರ ತಿಳಿಯಿತು. ಅವರಲ್ಲೊಬ್ಬ ಬಾಲಕ ಬಂದೇ ಇಲ್ಲ, ಎಲ್ಲರೂ ಎಲ್ಲಾ ದಿಕ್ಕಿನಲ್ಲೂ ಅವನನ್ನು ಹುಡುಕಿಕೊಂಡು ಹೊರಟೆವು. ಹೇಳಿ ಕೇಳಿ ಕಾಡು, ಏನಾದರೂ ಅನಾಹುತವಾದರೆ ಗತಿಏನು? ಎಂಬ ಆತಂಕ ಎಲ್ಲರಿಗೂ, ಹಾಗೇ ಅರ್ಧಗಂಟೆ ಕಳೆಯಿತು. ಆಗ ಒಂದು ಪೊದೆಯ ಬಳಿ ತರಗಿನ ಮಧ್ಯದಿಂದ ಸ್ಪ್ರಿಂಗ್‌ನ ಹಾಗೆ ಪುಟ್ಟಬಾಲಕನೊಬ್ಬ ಎದ್ದು ಜಿಗಿಯುತ್ತಾ ''ನನ್ನನ್ನು ಯಾರು ಹಿಡಿಯಲೇ ಇಲ್ಲ'' ಎಂದು ಬಂದ! ಇಲ್ಲಿ ನಮ್ಮೆಲ್ಲರ ಗಾಬರಿ ಅವನಿಗೆ ಹೇಗೆ ಅರ್ಥವಾಗಬೇಕು.

ಮಕ್ಕಳೊಡನೆ ಮಕ್ಕಳಾಗಬೇಕು. ಆಗ ಆ ಮುಗ್ಧತೆಯ ಹೊನಲಲ್ಲಿ ಮಿಂದು ಆನಂದಿಸಲು ಮತ್ತು ಅವರೊಡನೆ ಅವರ ಮಟ್ಟಕ್ಕೆ ಇಳಿದಾಗ ಮಾತ್ರ ಸ್ಕೌಟಿಂಗ್‌ನ್ನು ಅನುಭವಿಸಲು ಸಾಧ್ಯವಾಗುತ್ತದೆ. ಅವರಂತೆ ನಕ್ಕು ನಲಿವ ಶಕ್ತಿ ಸಾಮರ್ಥ್ಯಗಳಿದ್ದಾಗ ಮಾತ್ರವೇ ಅವರು ನಮ್ಮನ್ನು ಸ್ವೀಕರಿಸುವುದು. ಅದಕ್ಕಾಗಿ ಅವರ ಮಧ್ಯೆಯಿರುವಾಗ ನಾವು ನಮ್ಮ ವಯಸ್ಸು ಮತ್ತಿತರ ವ್ಯತ್ಯಾಸಗಳೆಲ್ಲವನ್ನು ಮರೆಯಬೇಕು.

ಒಮ್ಮೆ ''ಜಾಣ ಜಪಾನಿನ ಮಂಗಗಳು ಮೂರಿವೆ. ಅದರಲ್ಲಿ ಇದು ಒಂದು'' ಎಂಬ ಹಾಡನ್ನು ಮಕ್ಕಳಿಗೆ ಅಭಿನಯದೊಂದಿಗೆ ಹೇಳಿಕೊಡುತ್ತಿದ್ದೆ. ಎಲ್ಲರೂ ಅದನ್ನು ಹಾಗೆಯೇ ಹೇಳುತ್ತಾ ತಮ್ಮ ಮುಂದಿರುವವರ ಕಡೆ ಬೆರಳು ಮಾಡಿ ತೋರಿಸುತ್ತಾ ''ಅದರಲ್ಲಿ ಇದು ಒಂದು'' ಎಂದು ಹೇಳಬೇಕು. ಆಗಲೇ ಮಜಾ ತಿಳಿಯುವುದು. ಯಾಕೋ ಏನೋ ನಾನು ತಿರುಗಿ ಈ ಕಡೆ ನೋಡಿದರೆ ಅಲ್ಲಿರುವ ಹುಡುಗನೊಬ್ಬ ನನ್ನ ಕಡೆಗೆ ಬೆರಳು ತೋರಿಸುತ್ತಿದ್ದಾನೆ. ಆಗ ಅವರೊಡನೆ ನಾನೊಬ್ಬನಾಗಿ ಮನಃಪೂರ್ವಕವಾಗಿ ಹೊಟ್ಟೆ ಹುಣ್ಣಾಗುವಷ್ಟು ನಕ್ಕೆ.

ಮತ್ತೆ ಅದೇ ಮುತ್ತೋಡಿ, ಯಾವುದೋ ಒಂದು ಹಾಡನ್ನು ಮಕ್ಕಳಿಗೆ ಹೇಳಿಕೊಟ್ಟಿದ್ದೆ. ಹುಡುಗರೆಲ್ಲಾ ಗುಂಪಾಗಿ ಸ್ನಾನಕ್ಕಾಗಿ

ಸೋಮವಾಹಿನಿ ತೊರೆಗೆ ಹೋಗಿ ಬರುತ್ತಿದ್ದರು. ಸೊಂಟಕ್ಕೆ ಟವೆಲ್‌ಗಳನ್ನು ಸುತ್ತಿಕೊಂಡು ನಾನು ಹೇಳಿಕೊಟ್ಟಿದ್ದ ಹಾಡನ್ನು ಒಕ್ಕೊರಲಿನಿಂದ ಹೇಳುತ್ತಾ, ಕುಣಿಯುತ್ತಾ, ಟೆಂಟ್‌ಗಳಿಗೆ ಮರಳುತ್ತಿದ್ದ ದೃಶ್ಯ ಚೇತೋಹಾರಿಯಾಗಿತ್ತು. ಆಗ ನಾನು ನನ್ನ ಸಹಾಯಕರಾಗಿ ಬಂದಿದ್ದ ಗಿರೀಶ್ ಅವರಿಗೆ ಹೇಳಿದೆ. "ಮಕ್ಕಳ ಈ ರೂಪವನ್ನು ನೋಡುವ ಅದೃಷ್ಟ ಅವರ ಪೋಷಕರಿಗಿಲ್ಲವಲ್ಲ ಅದನ್ನು ದರ್ಶಿಸುವ ಅವರನ್ನು ತಿದ್ದುವ ಅವಕಾಶವಿರುವ ನಾವೇ ಅದೃಷ್ಟವಂತರು." ಎಂಬ ಮಾತು, ಭಾವನೆ ಹಾಗೇ ಹಸಿರಾಗಿದೆ.

ಹೊರ ದೇಶಗಳಲ್ಲಿ ಸ್ಕೌಟಿಂಗ್‌ಗೆ ಇರುವ ಪ್ರಾಧ್ಯಾನ್ಯತೆ ನೋಡಿದಾಗ ನಿಜಕ್ಕೂ ಅದು ಅನುಸರಣೀಯವೆಂದು ನನಗನ್ನಿಸುತ್ತದೆ. ಅದರಲ್ಲೂ ಮುಖ್ಯವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಅವರು ಮ್ಕಕಳಿಗೆ ಕೊಡುವ ಪ್ರಾಮುಖ್ಯತೆ ಪ್ರಶಂಸನೀಯ. ಆದರೆ ಅದರಿಂದ ವಂಚಿತರಾಗಿರುವ ನಮ್ಮ ಯುವಜನಾಂಗದ ಬಗ್ಗೆ ನನಗೆ ಕನಿಕರ ಮೂಡುತ್ತದೆ.

ಅಮೆರಿಕಾದ ಅರ್‌ಕನ್‌ಸಾ ರಾಜ್ಯ ಸ್ಕೌಟ್ ಆಯುಕ್ತರೊಡನೆ ಮಾತನಾಡುವಾಗ ಅವರು ಹೇಳಿದ ಮಾತು ಮರೆಯುವಂತಿಲ್ಲ. "ಅದು ಅಲ್ಲಿಯ ತನಕ ಬಾಹ್ಯಾಕಾಶಯಾನ ಮಾಡಿದ ೨೫ಜನರಲ್ಲಿ ೨೧ಜನ ಈಗಲ್ ಸ್ಕೌಟ್ಸ್" ಅಂತೆ. ಅವರು ನನಗೆ ಉಡುಗೊರೆಯಾಗಿ ನೀಡಿದ ಸ್ಕೌಟ್ಸ್ Badge (ಒಂದರ ಬೆಲೆ ೩ರಿಂದ ೫ ಡಾಲರ್‌ಗಳು) ಗಳನ್ನು ನೋಡಿದಾಗ ನನಗನ್ನಿಸುತ್ತಿತ್ತು. "ಸಮವಸ್ತ್ರಗಳನ್ನು ಹೊಲಿಸಿಕೊಳ್ಳುವುದೇ ಕಷ್ಟವಾಗಿರುವ ನಮ್ಮ ಮಕ್ಕಳಿಗೆ ಇಷ್ಟು ದುಬಾರಿಯಾದ ಬ್ಯಾಡ್ಜ್‌ಗಳನ್ನು ಕೊಂಡುಕೊಳ್ಳಲಾದೀತೆ?" ಎಂದು.

ವಾಷಿಂಗ್‌ಟನ್ ವೈಟ್ ಹೌಸ್ ಪ್ರವಾಸದ ಸಮಯದಲ್ಲಿ ನಾವು ಭೇಟಿಯಾದ ಒಂದು ಸ್ಥಳೀಯ ಗೈಡ್ ತಂಡ, ನ್ಯೂಯಾರ್ಕ್‌ನ ನ್ಯಾಚುರಲ್ ಹಿಸ್ಟರಿ ಮ್ಯೂಸಿಯಂ ಸುತ್ತುವ ಸಂದರ್ಭದಲ್ಲಿ ನಮಗೆ ಪರಿಚಯವಾದ ಒಬ್ಬ ಸ್ಕೌಟ್ ನಾಯಕನ ಒಡನಾಟ ಇವು ಹೆಚ್ಚು ಅನನ್ಯ. ಹಾಗೆಯೇ ಅದು ಈ ಚಳುವಳಿಯ ವಿಶ್ವ ಭ್ರಾತೃತ್ವದ ಅಗಾಧತೆಯನ್ನು ನಮ್ಮ ಅರಿವಿಗೆ ತಂದಿತು.

ಲಂಡನ್ ನಗರದ ಸ್ಕೌಟ್ ಪ್ರಧಾನ ಕಛೇರಿ ಮತ್ತು ಸ್ಕೌಟಿಂಗ್ ಕಾಶಿಯೆಂದೇ ಪ್ರಸಿದ್ಧ ಪಡೆದಿರುವ ಗಿಲ್ ವೆಲ್ ಪಾರ್ಕ್‌ಗಳು ಸಂದರ್ಶನ ಸಂತೋಷವನ್ನು ನೀಡಿದ್ದಲ್ಲದೆ ನನಗೆ ಬಹಳ ಹೆಮ್ಮೆ ಎನ್ನಿಸಿತು.

ಹಾಗೇ ಭಾರತ ದೇಶದ ತಂಡದ ನಾಯಕನಾಗಿ ಮೂರು ಜನ ಸ್ಕೌಟ್‌ಗಳೊಂದಿಗೆ ಥೈಲ್ಯಾಂಡಿನ ಚಾಆಮ್‌ನಲ್ಲಿ ನಡೆದ ಅಂತಾರಾಷ್ಟ್ರೀಯ ಜಾಂಬೂರಿಯಂತೂ ನನಗೆ ನನ್ನ ಜೀವಮಾನದಲ್ಲಿ ಒಂದು ಅತ್ಯಪೂರ್ವ ಅನುಭವ, ಥೈಲ್ಯಾಂಡಿನ ಎಲ್ಲಾ ಬಾಲಕ-ಬಾಲಕಿಯರಿಗೂ ಸ್ಕೌಟ್ಸ್ ಮತ್ತು ಗೈಡ್ಸ್ ಕಡ್ಡಾಯ. ಥೈಲ್ಯಾಂಡಿನ ಪ್ರಧಾನಿ, ಇಂಡೋನೇಷಿಯಾದ ರಾಯಭಾರಿ, ಅಲ್ಲಿನ ಗೌರ್‍ನರ್ ಮತ್ತು ಶಿಕ್ಷಣ ಮಂತ್ರಿ ಇತರ ಗಣ್ಯಾತಿ ಗಣ್ಯರೆಲ್ಲರೂ ಸ್ಕೌಟ್ಸ್ ಸಮವಸ್ತ್ರದಲ್ಲಿ ಎಲ್ಲರೊಡನೆಯೂ ಒಂದಾಗಿ ಬೆರೆಯುವುದನ್ನು ನೋಡಿದರೆ ಎಂಥವರಿಗೂ ಆಶ್ಚರ್ಯವೆನ್ನಿಸುತ್ತದೆ.

ನಮಗೆ ಅಂದರೆ ಹೊರದೇಶಗಳಿಂದ ಹೋದವರಿಗೆಲ್ಲಾ ಒಂದು ಪ್ರತ್ಯೇಕ ಸ್ಥಳದಲ್ಲಿ ಗುಡಾರಗಳನ್ನು ನಿರ್ಮಿಸಿದ್ದರು. ನಮ್ಮ ಎಡಗಡೆ ಪಾಕಿಸ್ತಾನ ಮತ್ತು ಬಲಗಡೆ ಶ್ರೀಲಂಕಾದವರು ಕುಳಿತುಕೊಂಡಿದ್ದರು. ಆಗ ನಾವೆಲ್ಲರೂ ಸಹ ಶಿಸ್ತು ಸಹಕಾರ ಸೌಹಾರ್ದತೆಗಳಿಂದ ಇದ್ದೆವೆಂದರೆ ಹೇಳತೀರದು. ನನಗನ್ನಿಸುತ್ತದೆ. "ನಮ್ಮ ರಾಜಕಾರಣಿಗಳು, ಹಾಗೆಯೇ ಬೇರೆ ಬೇರೆ ಯಾವುದೋ ಸಣ್ಣ ಪುಟ್ಟ ಕಾರಣಗಳಿಗಾಗಿ ಯಾರು ಯಾರನ್ನೋ ದ್ವೇಷಿಸುವರೆಂದು ಇಂತಹ ಸಮಾವೇಶಗಳಿಗೆ ಅಗತ್ಯವಾಗಿ ಕಳಿಸಬೇಕು ಎಂದು.

ಭಾರತದ ಬಗ್ಗೆ ಥಾಯ್‌ಗಳಿಗೆ ವಿಶೇಷ ಕಾಳಜಿ ಅಪಾರ ಪ್ರೀತಿ ಮತ್ತು ಅಭಿಮಾನ. ಅಲ್ಲಿ ನಾವು ಎಲ್ಲೇ ಹೋದರೂ ಕೂಡ ಥಾಯ್ ಗೈಡ್ ಮತ್ತು ಸ್ಕೌಟ್‌ಗಳು ಬಂದು ನಮ್ಮನ್ನು ಮುತ್ತುತ್ತಿದ್ದರು. ನಮಗೆ ಅಲ್ಲಿ ಎದುರಾದ ಬಹುಮುಖ್ಯವಾದ ಎರಡು ಸಮಸ್ಯೆಗಳೆಂದರೆ"ಆಹಾರ ಮತ್ತು ಭಾಷೆ" ಯದು ಎಂತಹ ಆಹಾರದಲ್ಲಿ ಬೇಕಾದರೂ ಬದುಕಬಲ್ಲೆನೆನ್ನುವವರು ಕೂಡ ಹೊಂದಿಕೊಳ್ಳಲಾಗದಂತಹದ್ದು 'ಥಾಯ್ ಫುಡ್'. ಸ್ಕೌಟರ್ ಸಮಾವೇಷದಲ್ಲಿ ರಾತ್ರಿ ಭೋಜನದಲ್ಲಿ ಕೊಟ್ಟ ಆಕ್ಟೋಪಸ್‌ಅನ್ನು ಮರೆಯುವಂತೆಯೇ ಇಲ್ಲ! ಏನು ಮಾಡುವುದು ನಾವೆಲ್ಲಾ ಹೆಚ್ಚು ಪಾಲು ಬ್ರೆಡ್ ತಿಂದೇ ಕಾಲ ಹಾಕುತ್ತಿದ್ದೆವು. ಹಾಗೆಯೇ ಕೆಲವು ದಿನ ನಾವೇ ಅಡುಗೆ ಮನೆಗೆ ಲಗ್ಗೆ ಹಾಕಿ, ಅವರಿಗೆ ಕೇಳಿ ಕಷ್ಟಪಟ್ಟು ಚಿತ್ರಾನ್ನ ಮಾಡಿಸಿಕೊಂಡು ತಿಂದೆವು.

ಮುಶಹಿಟೋ ನಕಮೀನೆ ಎಂಬ ಒಬ್ಬ ಜಪಾನಿಯನಿಗೆ ನಮ್ಮ ಚಿತ್ರಾನ್ನ ತುಂಬಾ ಹಿಡಿಸಿತು. ಬಹಳ ಇಷ್ಟ ಪಟ್ಟು ಅವನು ನಮ್ಮೊಡನೆ ಊಟಕ್ಕೆ ಬರುತ್ತಿದ್ದ.

ಬಹಳ ಕಡಿಮೆ ಜನಕ್ಕೆ ಇಂಗ್ಲಿಷ್ ಜ್ಞಾನವಿದ್ದುದ್ದರಿಂದ 'ಬ್ಯಾಂಕಾಂಕ್‌ನಲ್ಲಿ' ನಾವು ಹೆಚ್ಚಾಗಿ 'ಸಂಜ್ಞಾ' ಭಾಷೆಯನ್ನೇ

ಅವಲಂಬಿಸಬೇಕಾಗಿದ್ದಿತು. ಬ್ಯಾಂಕಾಂಕ್‌ನಲ್ಲಿ ನಾವು 'ಬುರನ್ ಸುಕ್ಸಾ' ಎಂಬ ಶಾಲೆಯೊಂದರಲ್ಲಿ ಉಳಿದುಕೊಂಡಿದ್ದೆವು. ಆಗ ಒಂದು ಮುಂಜಾವಿನಲ್ಲಿ ಎದ್ದು ಕಾಫಿ ಯನ್ನರಸಿಕೊಂಡು ಹೊರಟೆ. ಅಲ್ಲಿ ಒಂದು ಅಂಗಡಿಯ ಮುಂದೆ ನಿಂತು ಕಾಫಿಯನ್ನು ಕೇಳಲು ಶತಪ್ರಯತ್ನ ಪಡುತ್ತಾ ಕಾಫಿಯ ಕಡೆ ಕೈತೋರಿಸುತ್ತಿದ್ದೆ. ಸುಮಾರು ಪ್ರಯತ್ನ ಮತ್ತು ಸಮಯದ ನಂತರ ಅಂಗಡಿವಾಲಾ "ಓ ಕಫಾಯ ನಾ" ಎಂದು ಜೋರಾಗಿ ನಕ್ಕನು. ಅಂದರೆ ನಾನು ಅಷ್ಟೂ ಗೊತ್ತಿಲ್ಲದ ಮೂರ್ಖನೆನ್ನುವಂತೆ. ಥಾಯ್ ಜನರ ಸಂಸ್ಕೃತಿ ಸ್ನೇಹಮಯ. ನಡವಳಿಕೆ ಮತ್ತು ಸದಾ ಮಂದಹಾಸ ಸೂಸುವ ಆ ಮುಖಗಳು ಖಂಡಿತಾ ಎಲ್ಲರ ಹೃದಯವನ್ನು ಗೆಲ್ಲುತ್ತದೆ.

ಸ್ಕೌಟಿಂಗ್ ಬೆನ್ನೆಲುಬು 'ಪಟಾಲಂ' ಪದ್ಧತಿ (ಪ್ಯಾಟ್ರೋಲ್ ಸಿಸ್ಟಮ್) ನೇರವಾಗಿ ನಾನು ಹೇಳುವ ಪದ್ಧತಿಯನ್ನು ನಾನು ಆದಷ್ಟೂ ಕನಿಷ್ಟವಾಗಿಟ್ಟುಕೊಂಡಿರುತ್ತೇನೆ. ಅದೇ ನನ್ನ ದಳದ ಯಶಸ್ಸಿನ ಗುಟ್ಟು. ಸ್ವತಃ ದಿ. ಹಲಗಪ್ಪನವರು 'ಪಟಾಲಂ' ಪದ್ಧತಿಗೆ ಯಾವಾಗಲೂ ನನ್ನ ದಳವನ್ನು ಉದಾಹರಣೆಯಾಗಿ ಹೆಸರಿಸುತ್ತಿದ್ದರು ಕೂಡ. ಈ ಪದ್ಧತಿಯಲ್ಲಿ ಎಂಟು ಮಕ್ಕಳ ಗುಂಪಿರುತ್ತದೆ. ಅದರಲ್ಲೊಬ್ಬ ನಾಯಕ, ಪ್ಯಾಟ್ರೋಲ್‌ಲೀಡರ್ ಉಳಿದ ಏಳು ಬಾಲಕರಿಗೆ ಕಲಿಸುತ್ತಾನೆ. ತನ್ನದೇ ವಯಸ್ಸಿನವರಿಗೆ ಹೇಳಿಕೊಡುವ ಅವನು, ಅವರ ಮಟ್ಟದಲ್ಲಿಯೇ ಯೋಚಿಸುವುದರಿಂದ, ಅಲ್ಲಿ ಕಲಿಕೆ ಸುಲಭವಾಗುತ್ತದೆ ಮತ್ತು ಪರಿಣಾಮಕಾರಿಯಾಗಿರುತ್ತದೆ.

ಮಕ್ಕಳ ಶಕ್ತಿ ಸಾಮರ್ಥ್ಯಗಳ ಬಗೆಗೆ ನನಗೆ ಯಾವಾಗಲೂ ಅಗಾಧ ವಿಶ್ವಾಸ. ಹಾಗೆಂದು ಕೆಲವು ಬಾರಿ ಬೇಸರಪಡಿಸಿರುವುದಿಲ್ಲವೆನ್ನಲಾರೆ. ಆದರೆ ಅವರ ಆ ಕ್ರಿಯೇಟಿವ್ ಗುಣ ಖುಷಿ ತರುತ್ತದೆ. ಅಡಿಗೆ ಮಾಡುವ ಸ್ಪರ್ಧೆಯನ್ನೇರ್ಪಡಿಸಿದಾಗ ಕೆಲ ಮಕ್ಕಳು ನುರಿತ ಗೃಹಿಣಿಯರಿಗಿಂತಲೂ ರುಚಿಯಾಗಿ ಅಡುಗೆಯನ್ನು ಮಾಡಬಲ್ಲರು. ಹಾಗೇ ಸಿಗ್ನಲಿಂಗ್ ಹೇಳಿಕೊಟ್ಟಾಗ ವಯಸ್ಕರಿಗಿಂತ ಚುರುಕಾಗಿ ಅದನ್ನು ಗ್ರಹಿಸಬಲ್ಲರು. ಪಯನಿರಿಂಗ್ ಪ್ರಾಜೆಕ್ಟ್ ಮಾಡುವಾಗ ಐದಾರು ಗಂಟೆಗಳ ಕಾಲ ಅವಿರತ ಶ್ರಮದಿಂದ ಅದನ್ನು ಅಚ್ಚುಕಟ್ಟಾಗಿ ಪೂರೈಸುವರು. ಯಾವುದಕ್ಕೂ ಬೇಸರಪಡದೆ, ಗೊಣಗಾಡದೆ ಬೆರಳನ್ನು ತೋರಿಸಿದರೆ ಹಸ್ತವನ್ನು ನುಂಗುವಂತಹ ಬಾಲಕರು ಲಭಿಸಿದ್ದು ನನ್ನ ಪುಣ್ಯವೇ ಸರಿ. ಅವರೊಡನೆ ನಾನು ಕಳೆದಿರುವ ಸಮಯ ಅರ್ಥಪೂರ್ಣ ಮತ್ತು ಸಂತಸದಾಯಕ.

ನನ್ನ ಸ್ಕೌಟಿಂಗ್ ಬಗೆಗಿನ ಆಸಕ್ತಿ ಮತ್ತು ಬೆಳವಣಿಗೆಗೆ ಹಲವಾರು ಕಾರಣಕರ್ತರು. ಅವರಲ್ಲಿ ಮೊದಲನೆಯದಾಗಿ ನನಗೆ ಎಲ್ಲಾ ರೀತಿಯ ಸಹಕಾರ ಮತ್ತು ಪ್ರೋತ್ಸಾಹವನ್ನು ನೀಡಿದ ಶ್ರೀಮತಿ ಅಜ್ರಾ ಅವರು, ಕಾಲ ಕಾಲಕ್ಕೆ ನನ್ನ ಬೆನ್ನುತಟ್ಟಿ ಉತ್ತೇಜಿಸಿದ ಶ್ರೀ ಕೆ. ಬಿ. ನಂಜಪ್ಪನವರು, ಶ್ರೀ ಎಂ. ಹಲಗಪ್ಪನವರು, ರಾಷ್ಟ್ರೀಯ ತರಬೇತಿ ಆಯುಕ್ತರಾದ ಶ್ರೀ ರಂಗರಾವ್ ಮತ್ತು ಸುಕುಮಾರ್ ಅವರು, ಆದಿಕೇಶವಲು ಮತ್ತು ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯ ನನ್ನ ಸ್ಕೌಟ್ ಕುಟುಂಬ ಈ ಮೊದಲಾದವರಲ್ಲಿ ಯಾರನ್ನೂ ನೆನೆಯದೆ ಇರಲಿ? ಇವರೆಲ್ಲರ ಒತ್ತಾಸೆಯೇ ಮೂಲ ಪ್ರೇರಣೆ ಎನ್ನದಿರಲಾರೆ.

ನನ್ನ ಸ್ಕೌಟ್‌ಗಳಲ್ಲಿ ಬಹಳ ಮಂದಿ ಸಮಾಜದಲ್ಲಿ ಉನ್ನತ ಜವಾಬ್ದಾರಿಯುತ ಹುದ್ದೆಯನ್ನಲಂಕರಿಸಿದ್ದಾರೆ. ಸಮಾಜಕ್ಕೆ ಉಪಯುಕ್ತ ವ್ಯಕ್ತಿತ್ವವನ್ನು ಹೊಂದಿರುವ ಅವರ ಬಗೆಗೆ ನನಗೆ ಅತ್ಯಂತ ಹೆಮ್ಮೆ ಎನ್ನಿಸುತ್ತದೆ. ಜಗತ್ತಿನಲ್ಲಿ ಅತ್ಯಮೂಲ್ಯವಾದ ವಸ್ತು ಎನ್ನಿಸಿರುವ ಸಮಯವನ್ನು (ನನ್ನ) ನಾನು ಈ ಬಾಲಕರಿಗಾಗಿ ಸ್ವಲ್ಪವಾದರೂ ವ್ಯಯಿಸಿರುವುದೇ ನನಗೆ ನೆಮ್ಮದಿಕೊಡುವ ವಿಷಯ. ಆ ಮಕ್ಕಳ ಬಗೆಗೆ ಎಷ್ಟು ಹೇಳಿದರೂ ಸಾಲದು.

ಒಮ್ಮೆ ನಾನು ನನ್ನ ಸ್ಕೌಟ್ ಒಬ್ಬನ ಕಛೇರಿಗೆ ಯಾರೋ ಸಂದರ್ಶಕರನ್ನು ಕರೆದುಕೊಂಡು ಹೋದೆ. ಅವನು ತನ್ನ ಆಸನವನ್ನು ಬಿಟ್ಟುಕೊಟ್ಟು ಕುಳಿತುಕೊಳ್ಳಿ ಎಂದು ಕೇಳಿಕೊಂಡ. ಅದಕ್ಕೆ ನಾನು ಅಲ್ಲಪ್ಪಾ "ನಿನ್ನ ಕುರ್ಚಿಯಲ್ಲಿ ನಾನು ಹೇಗೆ ಕೂರಲಿ?" ಎನ್ನುವುದೇ ತಡ ಅವನು "ನಾನು ಈ ಕುರ್ಚಿಯಲ್ಲಿ ಕೂರುವ ಅರ್ಹತೆಯನ್ನು ಪಡೆದಿರುವುದೇ ನಿಮ್ಮಿಂದ" ಎಂದು ಕೂಡಲೇ ಹೇಳಿದ. ಹೃದಯ ತುಂಬಿ ಬರಲು ಇದಕ್ಕಿಂತ ಇನ್ನೇನು ಬೇಕು?.

ಅದೇ ರೀತಿ ನನ್ನ ಅತೀ ಪ್ರೀತಿ ಪಾತ್ರ ಸ್ಕೌಟ್ ಒಬ್ಬ ನನಗೊಂದು ಪತ್ರ ಬರೆದಿದ್ದ. "ನಾನು ಬೇಡನ್ ಪೊವೆಲ್‌ರನ್ನು ನೋಡಿಲ್ಲ. ಆದರೆ ನನ್ನ ಬೇಡನ್ ಪೊವೆಲ್ ನೀವೇ" ಎಂದು ಇದಕ್ಕಿಂತ ಹೆಚ್ಚಿನ ಶ್ಲಾಘನೇ. (Compliment) ಇದೆಯಾ ? ಅಂತ ಅನ್ನಿಸುತ್ತದೆ ನನಗೆ.

ನನ್ನ ಮತ್ತೊಬ್ಬ ಸ್ಕೌಟ್ ಇಂಜಿನಿಯರಿಂಗ್ ಶಿಕ್ಷಣವನ್ನು ಮುಗಿಸಿ ಕೆಲಸಕ್ಕೆ ಸೇರಿದ. ಆದರೆ ಅಷ್ಟಕ್ಕೆ ಮುಗಿಯಲಿಲ್ಲ. ತನಗೆ ಬಂದ ಮೊದಲ ತಿಂಗಳ ಸಂಬಳದ ಅರ್ಧಭಾಗವನ್ನು ಅವನು ನನಗೆ ಗುರುದಕ್ಷಿಣೆಯಾಗಿ ತಂದು ಕೊಟ್ಟ! ಇದೊಂದು ನನ್ನ ಜೀವಿತದಲ್ಲಿ ಅವಿಸ್ಮರಣೀಯ ಘಟನೆ ಎನ್ನದೇ ಇರಲಾರೆ.

ಸಾವಿರಾರು ಸ್ಕೌಟ್‌ಗಳಿಗೆ ತರಬೇತಿಯನ್ನು ನೀಡಿದ್ದೇನೆ. ಅವರಲ್ಲಿ ನೂರಾರು ವಿದ್ಯಾರ್ಥಿಗಳು ರಾಷ್ಟ್ರಪತಿ ಪುರಸ್ಕಾರವನ್ನು ಪಡೆದಿದ್ದಾರೆ. ನಾಯಕತ್ವ ನನಗೆ ತೃಪ್ತಿ ಮತ್ತು ಹೆಮ್ಮೆಯನ್ನು ನೀಡುವುದರೊಂದಿಗೆ ಜೀವನೋತ್ಸಾಹ ಮತ್ತು ಆನಂದವನ್ನು ನೀಡಿದೆ, ನೀಡುತ್ತಿದೆ. ಆದರೆ ಸ್ಕೌಟಿಂಗ್‌ಗೆ ನಾನು ಕೊಟ್ಟಿರುವುದಕ್ಕಿಂತ ನಾನು ಪಡೆದಿರುವುದೇ ಹೆಚ್ಚು, ಮಕ್ಕಳ ಒಡನಾಟ ಅವರಿಗೆ ಕಲಿಸುವುದಕ್ಕಾಗಿ ನಾನು ಹೆಚ್ಚು ಕಲಿಯಬೇಕೆಂಬ ಹಂಬಲ ನನ್ನ ವೈಯಕ್ತಿಕ ಬೆಳವಣಿಗೆಗೂ ಸಹಾಯಕವಾಗಿದೆ. ಸ್ಕೌಟಿಂಗ್‌ನ ಉದಾತ್ತ ಧ್ಯೇಯಗಳನ್ನು ಸ್ವಲ್ಪ ಮಟ್ಟಿಗಾದರೂ ಜೀವನದಲ್ಲಿ ಅಳವಡಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದೇನೆ. ಹಾಗೇ ಕಳೆದ ೩೪ವರ್ಷಗಳಿಂದ ಬಾಲಕರಿಗೆ ತಮ್ಮ ಬಿಡುವಿನ ವೇಳೆಯನ್ನು ಉಪಯುಕ್ತವಾಗಿ ಕಳೆಯುವ ಹವ್ಯಾಸವನ್ನು ಬೆಳೆಸುತ್ತಾ ಬಂದಿದ್ದೇನೆ. ಅದೇ ರೀತಿ ''ಈ ಸ್ಕೌಟಿಂಗ್ ಎನ್ನುವ ಮಾಂತ್ರಿಕ ಆಟದ ಸಂತೋಷ ಹೆಚ್ಚು ಹೆಚ್ಚು ಜೀವ ಜೀವಗಳನ್ನು ತುಂಬಲಿ ಎಂದು ಆಸೆಪಟ್ಟಿದ್ದೇನೆ''. ..... ಹೇಳುತ್ತಾ ಹೋದರೆ ಆ ಅನುಭವದ ಮೂಸೆಯೊಳಗೆ ಅರಳಿದ ಆನಂದದ ಕ್ಷಣಗಳಿಗೆ ಕೊನೆಯಿಲ್ಲ.

ಆದರೆ ಈ ಹೊತ್ತಿಗೂ ನನಗೆ ನಾನು ಬಸವನಹಳ್ಳಿ ಶಾಲೆಯಲ್ಲಿ ಸ್ಕೌಟ್ ಮಾಸ್ಟರ್ ಅಬ್ದುಲ್ ಹಮೀದ್ ಅವರ ದಳದಲ್ಲಿ ೨ವರ್ಷ ಪಡೆದ ನನ್ನ ಸ್ಕೌಟಿಂಗ್‌ನ ಮೊದಲ ದೀಕ್ಷೆ ಅಚ್ಚಳಿಯದೇ ಹಸಿರಾಗಿದ್ದು ಬದುಕನ್ನು ತಂಪಾಗಿಸಿದೆ.

ಅದಕ್ಕೂ ಮೊದಲು ೧೯೫೬ನೆಯ ಇಸವಿಯಲ್ಲಿ ತುಮಕೂರಿನಲ್ಲಿ ನಡೆದ ರಾಜ್ಯಮಟ್ಟದ ಸ್ಕೌಟ್ ಮತ್ತು ಗೈಡ್ ಜಾಂಬೂರಿ. ಆಗಿನ ರಾಜ್ಯ ಆಯುಕ್ತರಾಗಿದ್ದ ಜೆ. ಬಿ. ಮಲ್ಲಾರಾಧ್ಯ ಆ ಸಂದರ್ಭದಲ್ಲಿ ಸಮವಸ್ತ್ರ ಧರಿಸಿ ನನ್ನ ಅಣ್ಣನೊಂದಿಗೆ ಅಲ್ಲಿಗೆ ಹೋದ ನಾನು ಆ ಎರಡು ದಿನಗಳು ಅಲ್ಲಿ ನಡೆದ ಕಾರ್ಯಕ್ರಮಗಳನ್ನು ನೋಡಿದ್ದು ಜ್ವರ ಬಂದು 'ಟೆಂಟ್' ನಲ್ಲಿ ಹಾಗೇ ಮಲಗಿದ್ದು ಮಾತ್ರ ನನ್ನ ಪ್ರಜ್ಞೆಯ ರಸಾತಳದಲ್ಲಿ ಈ ಹೊತ್ತಿಗೂ ಮಾಸದೆ ಉಳಿದುಬಿಟ್ಟಿದೆ. ಅಂದು ನನ್ನಣ್ಣ ನನ್ನನ್ನು ಅಲ್ಲಿಗೆ ಕೈಹಿಡಿದು ಕರೆದುಕೊಂಡು ಹೋದ. ಈ ಹೊತ್ತು ನಾನು ಆ ಹಾದಿಯಲ್ಲಿ ನನ್ನ ವಿದ್ಯಾರ್ಥಿಗಳನ್ನು ಕೈಹಿಡಿದು ಕರೆದುಕೊಂಡು ಹೋಗುತ್ತಿದ್ದೇನೆ ಅಷ್ಟೆ.

ಎಷ್ಟೋ ಜನ ಬಹಳಷ್ಟು ಸಾರಿ ನನ್ನನ್ನು ಪ್ರಶ್ನಿಸುತ್ತಾರೆ. ''ನಿಮಗೆ ಇಷ್ಟು ವರ್ಷ ಆದರೂ ಸ್ಕೌಟಿಂಗ್ ಬೇಜಾರಾಗಿಲ್ವ'' ಅಂತ ! ನನಗನ್ನಿಸುತ್ತದೆ. ಅದೊಂದು ಕೆಲಸ ಅಥವಾ ಕರ್ತವ್ಯ ಅಂದುಕೊಂಡಾಗ ಮಾತ್ರ ಹಾಗಾಗುತ್ತದೆ. ಬದಲಿಗೆ ಅದೊಂದು ಆನಂದದಾಯಕ ಕ್ರಿಯೆ ಎಂದುಕೊಂಡಾಗ ಅಲ್ಲಿ ಬೇಸರದ ಪ್ರಶ್ನೆಯೇ ಇರುವುದಿಲ್ಲ. ....

ಮೇಲಾಗಿ ಪ್ರೀತಿಯಿದ್ದಾಗ ಎಲ್ಲವೂ ಸಹ್ಯವಲ್ಲವೆ ?

ಸ್ಕೌಟ್‌ನಲ್ಲಿ ಅಂಥ ಆನಂದದ ಪ್ರೀತಿ ನನ್ನದು!



> ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ.
> ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.
>
> \- ಜವಾಹರಲಾಲ್ ನೆಹರು

# ಆತ್ಮವಿಶ್ವಾಸ - ಏಕಾಗ್ರತೆ ಮೂಡಿಸಿದ ಚಳುವಳಿ

ಡಿ. ವಿ. ಗಿರೀಶ್

ಸೃಷ್ಟಿಯ ಬಗೆಗೆ ಏಳುವ ಪ್ರಶ್ನೆಗಳು ಎಲ್ಲದರ ಬಗ್ಗೆಯೂ ವಿಸ್ಮಯ, ಕುತೂಹಲ, ಬತ್ತದ ಅದಮ್ಯ ಉತ್ಸಾಹ. ಎಳೆಯ ಕಣ್ಣುಗಳನ್ನು ಇನ್ನಷ್ಟು ಹಿಗ್ಗಿಸಿ ಸಾಧ್ಯವಾದಷ್ಟೂ ದೂರದವರೆಗೂ ದಿಟ್ಟಿಸಿ ನೋಡುವ ಹಂಬಲ. ನೀಲಾಕಾಶದಲ್ಲಿ ಹಾರಾಡುವ ಸ್ವಚ್ಛಂದ ಹಕ್ಕಿಯಂತಹ ಮನಸ್ಸು. ಹೌದು! ಬಾಲ್ಯ ಒಂದು ಭಾವಗೀತೆಯಂತೆ, ಏನು ಬೇಕು? ಏನು ಬೇಡ? ಏನೊಂದನ್ನೂ ಅರಿಯದ ವಯಸ್ಸು ಅದು. ಮುಗ್ಧ ಜೀವಕ್ಕೆ ಕಂಡದ್ದೆಲ್ಲಾ ಬೇಕು. ಕಾಣುವುದೆಲ್ಲಾ ಚೆಂದ.

ಆಗ ನನಗಿನ್ನೂ ಹತ್ತೋ, ಹನ್ನೆರಡೋ ವರ್ಷ. ಮೌಂಟೆನ್ ವ್ಯೂ ಶಾಲೆಯಲ್ಲಿ ಹೈಯರ್ ಪ್ರೈಮರಿಯಲ್ಲಿ ಓದ್ತಿದ್ದೆ. ನನಗೆ ಚೆನ್ನಾಗಿ ನೆನಪಿದೆ. ಸ್ಕೌಟ್ಸ್ ಅಂದರೇನೆಂದು ನನಗೆ ಗೊತ್ತಿರ್‍ಲಿಲ್ಲ. ಶಾಲೆಬಿಟ್ಟ ತಕ್ಷಣ ಮಾಡುವುದೇನು? ನಮ್ಮ ಶಾಲೆ ಬಸ್ಸು ಬರೋಕ್ಕೆ ಸ್ವಲ್ಪ ಸಮಯ ಹಿಡೀತಿತ್ತು. ಸರಿ ಪುನಃ ಚೀಲ ಹೇಗಲಿಗೇರಿದ್ದೇ ತಡ ಆಟದ ಮೈದಾನದ ಕಡೆಗೆ ತಂತಾನೇ ಹೆಜ್ಜೆಗಳು ಹೋಗುತ್ತಿತ್ತು ( ಬುಧವಾರ ೩.೪೫ಕ್ಕೆ ನಮ್ಮ ಕ್ಲಾಸ್ ಬಿಡ್ತಿತ್ತು)

ಅಲ್ಲಿ, ನಮ್ಮ ಷಡಕ್ಷರಿ ಸರ್ ಸ್ಕೌಟ್ಸ್ ಮಕ್ಕಳಿಗೆ ಆಟ, ಪಾಠಗಳನ್ನು ಹೇಳಿಕೊಡುತ್ತಾ ಇರುತ್ತಿದ್ದರು. ಅದನ್ನು ನೋಡುತ್ತಾ ಹಾಗೇ ಕುಳಿತುಬಿಡುತ್ತಿದ್ದೆ. ಗಂಟೆಗಟ್ಟಲೆ ಹಿಡಿಯುತ್ತಿತ್ತು. ಮನೆಗೆ ಹೋಗೋ ಚಿಂತೆಯಿರುತ್ತಿರಲಿಲ್ಲ. ಸ್ಕೌಟ್ಸ್ ಸೇರುವುದಕ್ಕೆ ಮುಂಚೆಯೇ ನನ್ಗೆ ಎರಡು ನಾಟ್ ಗೊತ್ತಾಗಿತ್ತು.

ಹೈಸ್ಕೂಲ್ಗೆ ಅಂದರೆ ೮ನೆಯ ತರಗತಿಗೆ ಬಂದಾಗ ನಾನೂ ಸ್ಕೌಟ್ಸ್ ಸೇರಿದೆ. ಅದೂ ನನ್ನ ಗೆಳೆಯರಾಗಿದ್ದ ತಾರಾನಾಥ್ ಮತ್ತು ಸುನೀಲರವರ ಒತ್ತಾಸೆಯಿಂದ. ಅದಕ್ಕೂ ಮುಂಚೆಯೇ ಆ ಆಸೆ ಇದ್ದರೂ ಷಡಕ್ಷರಿ ಸರ್‌ನ ಕೇಳುವುದಕ್ಕೆ ಏನೋ ಒಂದು ಥರಾ ಸಂಕೋಚ ಮತ್ತು ಭಯ. ಆಸಕ್ತರನ್ನು ಸೇರಿಸುವುದಕ್ಕೆ ಷಡಕ್ಷರಿಸರ್ ಹೇಳಿದರೂಂತ ಅವರು ಹುಡುಕುತ್ತಾ ಬಂದದ್ದೇ ನಾನು ಸ್ಕೌಟ್ ಸೇರಲು ಕಾರಣವಾಯಿತು.

ಆನಂತರದ ನನ್ನ ಅನುಭವಗಳು ನನ್ನ ಅಪಕ್ವ ಮನಸ್ಸಿಗೊಂದು ರೂಪುರೇಷೆಗಳನ್ನು ನೀಡಿದ್ದು ನಿಜ. ಅದನ್ನು ಹಂಚಿಕೊಳ್ಳುವುದರಲ್ಲಿ ಒಂದು ಅವರ್ಣನೀಯ ಖುಷಿ ಇದೆ.

ನಾನಿನ್ನೂ ಸ್ಕೌಟ್‌ಗೆ ಹೊಸಬ, ಆಗ ಮುತ್ತೋಡಿಯಲ್ಲಿ ಒಂದು ಕ್ಯಾಂಪ್ ಇತ್ತು. (೭೩ ರ ನವೆಂಬರ್) ಸರಿ ಉತ್ಸಾಹದಿಂದಲೇ ಹೋದೆ. ನಾನು ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಕಾಡನ್ನು ನೋಡಲು ಹೋದದ್ದು ಆಗಲೇ. ಹಸಿರು ವನಸಿರಿ, ಮನ ಸೆಳೆವ ಪ್ರಕೃತಿ, ಚಿಕ್ಕಪುಟ್ಟವಲ್ಲದೆ ಆಳೆತ್ತರಕ್ಕೆ ಬೆಳೆದಿದ್ದ ಗಿಡಮರಗಳು, ನಿರ್ಭಿಡೆಯಿಂದ ಹಾರಾಡುವ ವಿಧವಿಧ ಹಕ್ಕಿಪಕ್ಷಿಗಳು, ಅದೊಂದು ಮರೆಯಲಾಗದ ಅನುಭವ. ಜಿಗಣೆ ಕೈಲಿ ಕಚ್ಚಿಸಿಕೊಂಡಿದ್ದು ಎಲ್ಲವೂ. ನಾವು ಹತ್ತು ಹನ್ನೆರಡು ಜನ. ೫, ೬, ಜನ ಸೀನಿಯರ್ ಇದ್ರು, ಪ್ರೆಸಿಡೆಂಟ್ಸ್ ಸ್ಕೌಟ್ ಆಗುವ ವರೆಗೂ ನಾವು ಅಲ್ಲೇ ಇದ್ದೆವು. ನಮ್ಮ ಸಂಖ್ಯೆ ೫೦ ಜನಕ್ಕಿಂತಲೂ ಹೆಚ್ಚಾಗಿತ್ತು. ಹಾಗಾಗಿ ಎರಡು ಟ್ರೂಪ್ ಮಾಡಿದ್ದರು. ನಾನು ಜೂನಿಯರ್, ಸೀನಿಯರ್ ಮತ್ತು ಅವೆರಡರ ಮಧ್ಯದ ಹಂತ, ಈ ಮೂರು ಹಂತದಲ್ಲಿ ಸ್ಕೌಟ್ ಆಗಿದ್ದೆ (೮ ರಲ್ಲಿ ಜೂನಿಯರ್, ೯ ರಲ್ಲಿ ಮಧ್ಯದ ಹಂತ, ೧೦ಕ್ಕೆ ಸೀನಿಯರ್) ಬೇರೆ ಬೇರೆ ತರಹದ ಪರ್ಥ್ಯವೂ ಇತ್ತು. ಆ ಎಲ್ಲದರ ಅನುಭವವೂ ನನ್ನದಾಗಿದ್ದು ನನ್ನ ಪೂಣ್ಯಾವೇ ಸರಿ.

ಸ್ಕೌಟ್‌ನ ಕಲಿಕೆ ಸಾಮಾನ್ಯ ಕಲಿಕೆಗಿಂತ ಭಿನ್ನವಾಗಿತ್ತು. ಸಾಮಾನ್ಯವಾಗಿ ಬುಧವಾರದ ದಿನ ನಾನೆಂದೂ ಮಿಸ್ ಮಾಡುತ್ತಿರಲಿಲ್ಲ. ಮಧ್ಯಾಹ್ನ ೧.೧೫ಕ್ಕೆ ಕ್ಲಾಸ್ ಬಿಡೋದು. ಆಗ ನಮಗೆ ಸ್ಕೌಟ್ ತರಬೇತಿ ಇರ್‍ತಿತ್ತು. ಒಂದೊಂದು ಸಾರಿ ಸಂಜೆ ೬ ಗಂಟೆಯೂ ಆಗ್ತಿತ್ತು. ಸರ್ ನಮಗಾಗಿ ಬಸ್ ಅನ್ನು ನಿಲ್ಲಿಸುತ್ತಿದ್ದರು.

ಟೈಮ್ ಮ್ಯಾನೇಜ್‌ಮೆಂಟ್ ಕಲಿಯುವುದಕ್ಕೆ ಆ ತರಬೇತಿ ಅತ್ಯಂತ ಸಹಕಾರಿಯಾಯಿತು. ೧ ರಿಂದ ೧-೩೦ರ ವರಗೆ ಊಟದ ಸಮಯ, ನಾವು ಊಟ ಮಾಡಿ ಗುಂಡಿಯನ್ನು ತೋಡಿ ಕೇವಲ ೧೦ ನಿಮಿಷದಲ್ಲಿ ಬಾವುಟ ಹಾಕಿ ಬರಬೇಕಿತ್ತು. ಆಗ ಟ್ರೂಪ್ ಮೀಟಿಂಗ್ ಇರ್‍ತಿತ್ತು ಕೂಡ. ನಮ್ಮ ಷಡಕ್ಷರಿ ಸರ್ ಸ್ಕೂಲ್‌ನಲ್ಲಿ ನೆಡೆಸುವ ಕ್ಯಾಂಪನಲ್ಲಿ ಮಿನಿಟ್ ಟು ಮಿನಿಟ್ ಯೋಜನೆ ಹಾಕುತ್ತಿದ್ದರು. ೩ ಗಂಟೆಯಿಂದ ೩-೪೫ ಕ್ಕೆ ಇದು, ೩.೪೫ ರಿಂದ ೩.೪೭ಕ್ಕೆ ಇನ್ನೊಂದು ಅಂತ. ಹಾಗೆಯೇ ಕ್ಯಾಂಪ್‌ಗೆ ಹೇಗೆ ತಯಾರಿ ಮಾಡುವುದು. ನಿರ್ದಿಷ್ಟ ಸ್ಥಳಕ್ಕೆ ತಲುಪುವುದು, ಅಲ್ಲಿಂದ ಮತ್ತೆಲ್ಲಿಗೆ ಹೋಗುವುದಕ್ಕೆ ಎಷ್ಟೆಷ್ಟು ಸಮಯ ತೆಗೆದುಕೊಳ್ಳುತ್ತದೆ ಎಲ್ಲವನ್ನೂ ತುಂಬಾ ಅಚ್ಚುಕಟ್ಟಾಗಿ ಮಾಡುತ್ತಿದ್ದರು. ಹಾಗಾಗಿ ನಾವು ಬೇರೆ ಯಾವ ಕ್ಯಾಂಪ್‌ಗೆ ಹೋದರು ಏನೋ ಕೊರತೆ ಅನ್ನಿಸುತ್ತಿತ್ತು. ಆದರೆ ರಾಜ್ಯಮಟ್ಟದಲ್ಲೂ ನಮ್ಮ ಪರ್‌ಫಾರ್ಮೆನ್ಸ್ ತುಂಬಾ ಚೆನ್ನಾಗಿತ್ತು.

ಷಡಕ್ಷರಿ ಸರ್ ಹೇಳಿಕೊಡುವ ರೀತಿ ಸೊಗಸಾಗಿತ್ತು. ಒಂದು ಬಾರಿ ಹೇಳಿದರೆ ಸಾಕು ಅದು ನಮಗೆ ಅರ್ಥವಾಗುವಂತೆ ಹೇಳುತ್ತಿದ್ದರು. ಹಾಗೇ ಅವರು ಹೇಳಿದ್ದನ್ನು ನಾವು ಚೆನ್ನಾಗಿ ಕಲಿತು ಹೇಳುವಂತೆ ನಮ್ಮಲ್ಲಿ ಉತ್ಸಾಹ ತುಂಬುತ್ತಿದ್ದರು ಕೂಡ. ನಮಗೆ ಗೊತ್ತಿಲ್ಲದುದರ ಬಗೆಗೆ ಸರಿಯಾದ ಮಾಹಿತಿಯನ್ನು ನೀಡುತ್ತಲೇ ಷಡಕ್ಷರಿ ಸರ್ ಸಣ್ಣಸಣ್ಣ ಕಥೆಗಳನ್ನು, ಸನ್ನಿವೇಶಗಳನ್ನು ತುಂಬಾ ಸರಳವಾಗಿ ಮನಮುಟ್ಟುವಂತೆ ವಿವರಿಸುತ್ತಿದ್ದರು. ಆದ್ದರಿಂದ ಅಲ್ಲಿ ಕಲಿಕೆ ಎಂದಿಗೂ ಬೇಸರವನ್ನು ಮೂಡಿಸಲೇ ಇಲ್ಲ.

ಹೊಸಹೊಸ ಆಟಗಳನ್ನು ಹೇಳಿಕೊಟ್ಟು ನಮ್ಮಿಂದ ಆಡಿಸುತ್ತಿದ್ದರು. ಷಡಕ್ಷರಿ ಸರ್ ಆಗತಾನೇ ಅಮೆರಿಕಾಕ್ಕೆ ಹೋಗಿಬಂದುದ್ದರಿಂದ ಸ್ಕೌಟ್ಸ್ ಬಗೆಗಿನ ಅವರ ಉತ್ಸಾಹ, ವಿಚಾರಗಳು ಇಮ್ಮಡಿಯಾಗಿದ್ದಿತು. ಅದರ ಸದುಪಯೋಗ ನಮ್ಮದಾಯಿತು. ಬೇಡನ್‌ಪೊವೆಲ್ ಸೈನಿಕನಾಗಿ ಹೇಗೆ ಹೋದ? ಹಾಗೆ ಸೈನ್ಯದ ಕತೆ ಪತ್ತೆ ಮಾಡಿದ? ಅವನ ಪೋಸ್ ಹೇಗಿತ್ತು? ಯಾವರೀತಿ ಬಟ್ಟೆಯನ್ನು ತೊಡುತ್ತಿದ್ದ? ಅಂತ ಅವರು ಹೇಳುತ್ತಿದ್ದುದು ನಮ್ಮಲ್ಲಿ ಅದರ ಬಗಗ್ಗೆ ಆಸಕ್ತಿಯನ್ನು ಅರಳಿಸುತ್ತಿದ್ದಿತು.

ತುಂಬಾ ವೈಡ್‌ಗೇಮ್ಸ್, ಅಬ್ಸರ್‌ವೇಷನ್ ಗೇಮ್ಸ್‌ಗಳನ್ನು ಹೇಳಿಕೊಟ್ಟಿದ್ದರು. ನೆನಪಿಟ್ಟುಕೊಳ್ಳುವ ಆಟದಲ್ಲಿ ಅವರು ಮೊದಲನೆಯವನಿಗೆ ಹೇಳಿದ್ದನ್ನು ಕೇಳಿಸಿಕೊಂಡು ಅವರು ಇನ್ನೊಬ್ಬನಿಗೆ, ಆ ಇನ್ನೊಬ್ಬ ಮತ್ತೊಬ್ಬನಿಗೆ ಹೇಳಬೇಕಾಗಿತ್ತು. ಬರೆದಿಟ್ಟುಕೊಳ್ಳದೇ ಹೇಳಬೇಕಾದದ್ದನ್ನು ಕೊನೆಯವನು ಕೇಳಿಸಿಕೊಂಡು ಹಾಗೇಯೇ ಹೇಳಬೇಕಾಗಿದ್ದಿತು. ಇದರಿಂದ ನಾವು ತುಂಬಾ ಗಮನವಿಟ್ಟು ಅವರು ಹೇಳುವುದನ್ನು ಕೇಳಿಸಿಕೊಳ್ಳುತ್ತಿದ್ದೆವು. ಹಾಗೆಯೇ ನಾವು ಹೇಳುವುದನ್ನು ನಮ್ಮಿಂದ ಕೇಳಿಸಿಕೊಳ್ಳುವವನೂ ಚೆನ್ನಾಗಿ ಕೇಳಿಸಿಕೊಳ್ಳಬೇಕು ಎಂಬ ಹುರುಪು ನಮ್ಮಲ್ಲಿತ್ತು.

ಕಾಡಿನಲ್ಲಿ ಹೇಗೆ ನಡೆಯಬೇಕು? ನೀಲಿನಕಾಶೆಯನ್ನು ತಯಾರಿಸುವುದು, ಲ್ಯಾಂಡ್‌ಮಾರ್ಕ್, ತಲುಪಬೇಕಾದ ಸಮಯ, ಸ್ಥಳ ಎಲ್ಲವನ್ನೂ ಯೋಜಿತವಾಗಿಯೇ ಹೇಳುತ್ತಿದ್ದರು. ನಾವು ಅದರಂತೆ ನಡೆಯಬೇಕಾಗಿದ್ದಿತು.

ಈಗಲೂ ನನ್ನ ನೆನಪಿನಲ್ಲಿ ಹಸಿರಾಗಿರೋದು ನಾವು ಮುತ್ತೋಡಿಗೆ ೮ ಕಿ.ಮೀ. ನಡೆದು ಹೋದದ್ದು, ೩೦ ಜನಕ್ಕಾಗಿ ೩ ದಿನಕ್ಕಾಗುವಷ್ಟು ಅಕ್ಕಿ, ಬೇಳೆ, ದಿನಸಿಯಾದಿಯಾಗಿ ನಮ್ಮ ಲಗೇಜನ್ನು ಹೊತ್ತು ಸಾಗಿದ್ದು. ಮುಂದೆ ಹೋಗಿ ತಯಾರಿ ನಡೆಸುವುದಕ್ಕಾಗಿ ಅಡಿಗೆಭಟ್ಟರೊಂದಿಗೆ ಬೇಗ ಬೇಗ ಹೆಜ್ಜೆ ಹಾಕಿದ್ದ ಷಡಕ್ಷರಿ ಸರ್ ಮತ್ತು ಭಟ್ಟರು ಆ (ಕ್ಯಾಂಪ್) ಸ್ಥಳವನ್ನು ನಾವು ತಲುಪಿ ಎಷ್ಟು ಹೊತ್ತಾದರೂ ಬಾರದಿದ್ದಾಗ ನಾವೇ ಮೊದಲೆಂಬ ವಿಜಯಿ ಭಾವದಲ್ಲಿ ಲ್ಯಾಂಪ್‌ಹಿಡಿದು ಅವರಿಬ್ಬರನ್ನು ಹುಡುಕುವುದಕ್ಕೆ ಹೊರಟಿದ್ದು.

ನಾವು ಗೆಳೆಯರೆಲ್ಲಾ ನೀರಲ್ಲಿ ಒಟ್ಟಿಗೆ ಈಜಿದ್ದು. ನೀರನ್ನು ಎರಚಾಡುತ್ತಾ ಕೇಕೆ ಹಾಕಿದ್ದು, ನೈಟ್‌ಗೇಮ್ಸ್ ಕಾಡಿನ ಆ ಸ್ನಿಗ್ಧ (ಭಯಾನಕವೆಂದು ಕೊಂಡಿದ್ದ) ಸುಂದರ ವಾತಾವರಣ.

ಬೇರೆ ಪ್ಯಾಟ್ರೋಲ್‌ಗಿಂತ ನಮ್ಮ ಪ್ಯಾಟ್ರೋಲ್ ಚೆನ್ನಾಗಿ ಕೆಲಸ ಮಾಡಬೇಕೆನ್ನುವ ಆಸೆ ಮತ್ತು ಛಲವಿರುತ್ತಿತ್ತು. ಆದರೆ ನಮ್ಮ ನಡುವಿನ ಸ್ಪರ್ಧೆ ಆರೋಗ್ಯಪೂರ್ಣವಾಗಿತ್ತೆಂದೇ ಹೇಳಬೇಕು. ಕಾರಣ ಅವರು ಮಾಡುವ ಕೆಲಸವೂ ಚೆನ್ನಾಗಿತ್ತು. ಅದಕ್ಕಿಂತಲೂ

ನಾವು ಚೆನ್ನಾಗಿ ಮಾಡಬೇಕೆಂಬ ಆಕಾಂಕ್ಷೆ ಅಲ್ಲಿರುತ್ತಿತ್ತೇ ಹೊರತು ಅಹಂಕಾರ ಅಥವಾ ಹಠವಲ್ಲ. ಅವರ ಗುಂಪು ಒಳ್ಳೆಯದು, ನಮ್ಮ ಗುಂಪೂ ಒಳ್ಳೆಯದು. ಆದರೆ ಅದರಲ್ಲಿ ನಮ್ಮದು ಉತ್ತಮವಾಗಿರಬೇಕು ಅಂತ ಯೋಚಿಸುತ್ತಿದ್ದೆವು ಸದಾ ಎಲ್ಲರು. ಹಾಗಾಗಿ ಒಂದು ರೀತಿ ಎಲ್ಲರ ಪ್ರಯತ್ನವೂ ಪ್ರಾಮಾಣಿಕತೆಯಿಂದ ಶ್ರದ್ಧೆಯಿಂದ ಕೂಡಿರುತ್ತಿದ್ದು ಫಲಿತಾಂಶ ಒಳ್ಳೆಯದೇ ಆಗಿರುತ್ತಿತ್ತು.

ನನಗೆ ಜೀವನಮಾನದಲ್ಲಿ ಸ್ಕೌಟ್ ನಿಂದಾಗಿ ತುಂಬಾ ಜ್ಞಾಪಕಕ್ಕೆ ಬರುವುದೆಂದರೆ "ಕೆಸವೆ" ಯಲ್ಲಿ, ಷಡಕ್ಷರಿ ಸರ್ ನೇತೃತ್ವದಲ್ಲಿ ನಾವು ಮಾಡಿದ 'ಸರ್ವಧರ್ಮ ಪ್ರಾರ್ಥನೆ'. ಆಗ ಕ್ಯಾಂಡಲ್ ಇಟ್ಟು ಪ್ರಾರ್ಥಿಸುವಾಗ ನಾವು ಯಾರೂ ಮಾತಾಡುತ್ತಿರಲಿಲ್ಲ. ಭಕ್ತಿ ಹೌದೋ ಅಲ್ಲವೋ, ಮೌನದಿಂದಲೇ ನಮ್ಮಂತೆಯೇ ಇತರರೂ ಪ್ರಾರ್ಥಿಸುತ್ತಾರೆ. "ಪ್ರತಿಯೊಬ್ಬರಿಗೂ" ಗೌರವನ್ನು ಕೊಡುವುದನ್ನು ಕಲಿಯಬೇಕು. ಇಲ್ಲಿ ಎಲ್ಲರೂ ಸಮಾನರು ಹಾಗೆಯೇ ಪ್ರತಿಯೊಬ್ಬರೂ ಗೌರವವನ್ನು ಪಡೆಯಬೇಕು ಎನ್ನುವುದು ತಿಳಿಯಿತು. ಇಂದು ಅದಕ್ಕೆಲ್ಲಾ ಮಾತು ಪೋಣಿಸುತ್ತಿದ್ದೇನೇನೋ. ನಿಧಾನವಾಗಿಯಾದರೂ ಒಂದೊಂದೇ ಅರ್ಥವಾಗುತ್ತಾ ಹೋಯಿತು. ಇವತ್ತಿಗೂ ಅರ್ಥ ಮಾಡಿಕೊಳ್ಳಬೇಕಾದದ್ದು ಇದೆ ಎನ್ನಿ. ಆದರೆ 'ಆತ್ಮಗೌರವದ ಬಗಗೆ ಆ ಎಳೆಯವಯಸ್ಸಿನಲ್ಲಿಯೇ ನಮ್ಮಲ್ಲಿ ಸಾಕಷ್ಟು ಜಾಗೃತಿಯನ್ನು ಮೂಡಿಸಿದ ನಮ್ಮ ಗುರುಗಳನ್ನು ನಾವು ಹೇಗೆ ಮರೆಯುವುದಕ್ಕಾಗುತ್ತದೆ?

ನಮ್ಮ ಶಾಲೆಯ ಪ್ರಾಂಶುಪಾಲರಾಗಿದ್ದ ಅಜ್ರಾಮೇಡಂ ಕೂಡ ನಮ್ಮ ಸ್ಕೌಟ್ ಚಟುವಟಿಕೆಗಳಿಗೆ ತುಂಬಾ ಉತ್ತೇಜನವನ್ನು ನೀಡುತ್ತಿದ್ದರು. ಒಂದುರೀತಿ ನಮ್ಮ ಸ್ಕೌಟಿಂಗ್‌ನ ಕ್ರಿಯಾಶೀಲತೆಗೆ ಅವರು ಬ್ಯಾಕ್‌ಬೋನ್ ಆಗಿದ್ರು ಎಂದರೆ ತಪ್ಪಿಲ್ಲ. ನಾವು ಯಾವುದಾದರೂ 'ಕ್ಯಾಂಪ್' ಅನ್ನು ಅಟೆಂಡ್ ಮಾಡಿ ಬಂದರೆ ನಮ್ಮನ್ನು ಕರೆಸಿ ಪಕ್ಕದಲ್ಲಿ ಕೂರಿಸಿಕೊಂಡು ಪ್ರೀತಿಯಿಂದ ಅದರ ಬಗೆಗೆ ಗಂಟೆಗಟ್ಟಲೆ ಕೇಳೋರು. (ಅದರ ರಿಪೋರ್ಟ್ ಇದೆ ಇವತ್ತಿಗೂ). ಅವರಿಗೆ ನಮ್ಮ ಸಾಹಸಗಳನ್ನು ಹೇಳುವುದಕ್ಕೆ ನಮಗೆಲ್ಲರಿಗೂ ತುಂಬಾನೇ ಖುಷಿಯಾಗುತ್ತಿತ್ತು. ಇದರಿಂದ ನಮ್ಮ ಮತ್ತು ಷಡಕ್ಷರಿಸರ್ ಹಾಗೂ ಅಜ್ರಾಮೇಡಂನ ನಡುವೆ ಒಂದು ಇಂಟಿಮಸಿ ಇತ್ತು. ಅದ್ರಿಂದ ಪ್ರೀತಿವಿಶ್ವಾಸ ಸಹಜವಾಗೇ ದಿನದಿನಕ್ಕೂ ವೃದ್ಧಿಯಾಗುತ್ತಿತ್ತು. ಅವರಲ್ಲಿ ನಮ್ಮ ಬಗೆಗೆ ಯಾವ ರೀತಿ ನಂಬಿಕೆ ಹುಟ್ಟಿತ್ತೆಂದರೆ ನನಗೆ ಹೇಳಿಕೊಳ್ಳುವುದಕ್ಕೆ ಹೆಮ್ಮೆ ಎನ್ನಿಸುತ್ತದೆ. ಏನಾದರೂ ಕೆಲಸವನ್ನೂ ಹೇಳಬೇಕಾದಾಗ ಇತರ ವಿದ್ಯಾರ್ಥಿಗಳ ಜತೆ ಒಬ್ಬ ಸ್ಕೌಟ್ ಇದ್ದರೆ, ಅವನಿಗೆ ಆ ಕೆಲಸವನ್ನು ಹೇಳಿ ನಿರುಮ್ಮಳರಾಗುತ್ತಿದ್ದರು. ಇದರಿಂದ ಸ್ಕೌಟ್ ಬಗೆಗೆ ನಮ್ಮಲ್ಲಿ ಒಂದು ರೀತಿ ಪ್ರೀತಿ ಹೆಚ್ಚುತ್ತಿತ್ತು. ಹಾಗೆಯೇ ಯಾರನ್ನಾದರೂ ಸುಲಭವಾಗಿ ಮಾತನಾಡಿಸುವಂತಹ, ಆತ್ಮವಿಶ್ವಾಸವನ್ನು ನಮ್ಮಲ್ಲಿ ಅದು ತುಂಬಿತು.

ನಾನು ಜಿಲ್ಲಾಮಟ್ಟ (ದೊಡ್ಡಬಳ್ಳಾಪುರ) ರಾಜ್ಯಮಟ್ಟ (ಬೆಂಗಳೂರು, ಮೈಸೂರು) ಮತ್ತು ರಾಷ್ಟ್ರ ಮಟ್ಟದ ಸ್ಕೌಟ್ಸ್ ಜಾಂಬೂರಿಗಳಲ್ಲಿ ಭಾಗವಹಿಸಿದ್ದೀನಿ. ಅಲ್ಲೆಲ್ಲ ಹೇಗೆ ವರ್ತಿಸಬೇಕು? ಬೇರೆಯವರ ಹತ್ತಿರ ಹೇಗೆ ಮಾತನಾಡುವುದು? ಹೇಗೆ ಬೇರೆಬೇರೆ (ರಾಬಿನ್ ಸ್ಕೌಟ್) ಹಂತದ ಜವಾಬ್ದಾರಿಗಳನ್ನೂ ನಿಭಾಯಿಸುವುದು? ಸಂಘಟನೆ ಮಾಡುವುದು ಹೇಗೆ? ನೈಪುಣ್ಯತೆಯನ್ನು ಗಳಿಸುವುದು ಹೇಗೆ? ಎಲ್ಲವನ್ನು ಕಲಿಯುವುದಕ್ಕೆ ಅವಕಾಶ ಮಾಡಿಕೊಟ್ಟವರು ನಮ್ಮ ಸರ್, ಹಾಗೆಯೇ ನಾವೆಲ್ಲಾ ನಿರ್ಭಿಡೆಯಿಂದ ನಾಟಕ, ಹಾಡು (ಸಮೂಹ) ಡ್ರಾಯಿಂಗ್ ಎಲ್ಲದರಲ್ಲೂ ಭಾಗವಹಿಸುವಷ್ಟರ ಮಟ್ಟಿಗೆ ನಾವು ತಯಾರಾಗಿದ್ದೆವು. ಷಡಕ್ಷರಿ ಸರ್ ಬೇರೆಬೇರೆ ದೇಶಗಳಲ್ಲಿ ಅಲ್ಲಿನ ಕರೆನ್ಸಿಯನ್ನು ಹೇಗೆ ಗೌರವಿಸುತ್ತಾರೆ? ಅವರ ದೇಶಪ್ರೇಮ ಎಂಥದ್ದು? ಎಂದು ವಿವರಿಸುತ್ತಿದ್ದಾಗ ನಾವೂ ಕೂಡ ನಮ್ಮ ಕರೆನ್ಸಿ ಬಗ್ಗೆ, ದೇಶದ ಬಗ್ಗೆ ಅಭಿಮಾನವನ್ನು ಬೆಳೆಸಿಕೊಳ್ಳುವ ಅಗತ್ಯತೆಯ ಅರಿವಾಗುತಿತ್ತು. ಅದು ನನ್ನ ಬದುಕಿಗೊಂದು ಏಕಾಗ್ರತೆಯನ್ನು ನೀಡಿದೆ.

ಸ್ಕೌಟಿಂಗ್ ಆಗ್ಲಿ, ಸ್ಕೂಲ್ ಆಗ್ಲಿ ಮನಸ್ಸಿಟ್ಟು ಕಲಿಯುವುದನ್ನು ನಾವು ಕಲಿತೆವು. ಹಾಗೇ ಜೀವನದಲ್ಲಿ ರಾಜಿಯಾಗದ್ದನ್ನು (ಆತ್ಮಸಾಕ್ಷಿ ಒಪ್ಪದ್ದಕ್ಕೂ) ಕಲಿತದ್ದು ಕೂಡ ಅಲ್ಲಿಯೇ, ಏಕೆಂದರೆ ಸರ್ ಹೇಳುತ್ತಿದ್ದರು. ಶೇಕಡಾ ೯೯ ಪ್ರಾಮಾಣಿಕತೆ ಅನ್ನೋದು ಇಲ್ಲವೇ ಇಲ್ಲ ಎಂದು. ಒಂದು ಹೆಜ್ಜೆ ಈ ಕಡೆ ಆದರೂ ಅದು ತಪ್ಪೆಂದು ಕೂಡ ಹೇಳುತ್ತಿದ್ದರು. ಇದ್ರಿಂದ ಸ್ಕೌಟ್ ಮಕ್ಕಳೆಲ್ಲಾ ಪ್ರಾಮಾಣಿಕತೆ, ಸರಿ, ತಪ್ಪುಗಳ ಬಗೆಗೆ ವಿವೇಚನೆ ಮಾಡ್ಲಿಕ್ಕೆ ಸಹಾಯವಾಗುತ್ತಿತ್ತು.

ಷಡಕ್ಷರಿ ಸರ್‌ನ ಮೆಚ್ಚಿಸುವುದಕ್ಕಾಗಿ ಏನೆಲ್ಲಾ ಪ್ರಯತ್ನ ಪಡುತ್ತಿದ್ದೆವು. ನಮ್ಮ ಕೆಲಸವನ್ನು ನೋಡಿ ಅವರು ಶಬಾಸ್‌ಗಿರಿ ಕೊಡಬೇಕೆಂಬ ಆಸೆ ಕೂಡ ನಮ್ಮದಾಗಿದ್ದಿತು. ಆದರೆ ಎಷ್ಟೋ ಬಾರಿ ನಾನು ಅವರಿಂದ ಬೈಯಿಸಿಕೊಳ್ಳುವ ಸಂದರ್ಭಗಳೂ ಬಂದಿವೆ.

ಒಮ್ಮೆ ಬೇಡನ್‌ಪೊವೆಲ್‌ರ ಹುಟ್ಟು ಹಬ್ಬದ ಶುಭಾಶಯ ಪತ್ರವನ್ನು ಬರೆಯಬೇಕಾಗಿದ್ದಿತು. ಒಂದು ಸಾರಿ ಬರೆದೆ, ದಪ್ಪವಾಯಿತು ಅಕ್ಷರ, ಮತ್ತೊಮ್ಮೆ ತೀರಾ ಸಣ್ಣದಾಯಿತು. ಹಾಗಾಗಿ ೨ ಸಾರಿ ಕಾಗದವನ್ನು ವೇಸ್ಟ್ ಮಾಡಿದೆ. ಇದರಿಂದ ಕೋಪಗೊಂಡ ಸರ್ ನಾನು ಮೂರನೆಯ ಷೀಟ್ ಕೇಳಿದಾಗ ಇದು 'ನ್ಯಾಷನಲ್ ವೇಸ್ಟ್' ಎಂದು ಬೈಯುತ್ತಾ ಕಾಗದದ ಉತ್ಪಾದನೆಗೆ ಬೇಕಾದ ಸ್ವಾಭಾವಿಕ ಸಂಪನ್ಮೂಲಗಳು, ಶಕ್ತಿ, ಮರ ಎಲ್ಲದರ ಬಗೆಗೆ ವಿವರಿಸಿ ಒಂದು ರೀತಿ ಆ ಬಗೆಗೆ ಪ್ರಜ್ಞೆಯನ್ನು ನನ್ನಲ್ಲಿ ಮೂಡಿಸಿದರು. ಇವತ್ತಿಗೂ ಏನಾದ್ರೂ ಬರೀಬೇಕಾದಾಗ ಅದು ನನಗೆ ಜ್ಞಾಪಕಕ್ಕೆ ಬರುತ್ತದೆ.

ಇನ್ನೊಂದು ಬಾರಿ ಒಂದು ಕಾರ್ಯಕ್ರಮದಲ್ಲಿ ಅತಿಥಿಗಳಿಗೆ ವಂದಿಸುವ ಜವಾಬ್ದಾರಿ ನನ್ನದಾಗಿದ್ದಿತು. ಷಡಕ್ಷರಿ ಸರ್ ಒಂದಲ್ಲ, ಎರಡು ಮೂರು ಬಾರಿ ಹೇಳಿದರು. ಭಾಷಣವನ್ನು ಬರೆದುಕೊಳ್ಳುವುದಕ್ಕೆ. (ಹೆಸರುಗಳನ್ನು) ನಾನು ನೆನಪಿಟ್ಟುಕೊಳ್ಳುತ್ತೇನೆ ಎಂದು ಉತ್ತರಿಸಿದೆ. ಆಗ ಸುಮ್ಮನಾದರು. ಆದರೆ ನಾನು ಮಾಡಿದ ತಪ್ಪೆಂದರೆ ಅತಿಥಿಗಳ ಹೆಸರನ್ನು ತಪ್ಪಾಗಿ ಕರೆದದ್ದು! ಆನಂತರ ಕರೆದ ಸರ್, ನನ್ನ ಬೇಜವಾಬ್ದಾರಿತನಕ್ಕಾಗಿ ಚೆನ್ನಾಗಿ ಬೈದರು.

ಹಾಗೆಯೇ ಅವರು ತಮಗೆ ಕಲಿಸಿದ ಇನ್ನೊಂದು ಬಹುಮುಖ್ಯ ಪಾಠವೆಂದರೆ ಸೋತಾಗಾ ಸೋಲನ್ನು ಒಪ್ಪಿಕೊಳ್ಳುವುದು ! ಸೋತೆವಾ, ಇರಲಿ ಮತ್ತೆ ಜೀವನದಲ್ಲಿ ಗೆಲ್ಲಬಹುದು. ಯಾವಾಗಲೂ ೨ನೆಯ ಅವಕಾಶವಿದ್ದೇ ಇರುತ್ತದೆನ್ನುವ ಸಮಾಧಾನ. ಅದರಿಂದ ನಮಗೆ ಜೀವನದ ಏರುಪೇರುಗಳನ್ನು ಸೋಲುಗೆಲುವುಗಳನ್ನು ಒಂದು ರೀತಿಯಲ್ಲಿ ಸಮಚಿತ್ತದಿಂದ, ನಿರ್ಲಿಪ್ತವಾಗಿ ಸ್ವೀಕರಿಸೋ ಗುಣ ಬೆಳೆಯಿತು. ಇವತ್ತಿಗೂ ಅದು ನಮ್ಮನ್ನು ಜೀವನದ ಮೆಟ್ಟಿಲುಗಳನ್ನು ಒಂದೊಂದಾಗಿ ಏರಲು ಸಹಾಯಕವಾಗುತ್ತಿದೆ.

ನಮಗೆ ಯಾವಾಗಲೂ ಬುಧವಾರ ಸ್ಕೌಟ್ ಕ್ಲಾಸ್ ಇರುತ್ತಿತ್ತು. ಅದಕ್ಕಾಗಿ ಮುಂಚಿತವಾಗಿಯೇ ಅಂದರೆ ಮಂಗಳವಾರವೇ ಸಂಜೆ ಒಂದರ್ಧಗಂಟೆಯಲ್ಲಿ ಮಾರನೆಯ ದಿನ ತರಗತಿಯಲ್ಲಿ ನಾವು ಏನೆಲ್ಲಾ ಮಾಡಬೇಕು? ಎಷ್ಟು? ಯಾವ ರೀತಿ? ಹೇಗೆ ? ಯಾರು ಯಾರು ಯಾವ ಕೆಲಸವನ್ನು ನಿರ್ವಹಿಸಬೇಕು? ಅದರಿಂದಾಗ ಬಹುದಾದ ಪ್ರಯೋಜನ? ಎಲ್ಲದರ ಬಗೆಗೂ ಯೋಜನೆಯನ್ನು ನಾವೇ ತಯಾರಿಸ ಬೇಕಾಗಿತ್ತು. ಇದು ನಾವು ಮಾಡಬೇಕಾದುದರ ಬಗೆಗೆ ಪೂರ್ವಭಾವಿಯಾಗಿ ಚಿಂತಿಸುವಂತೆ ಮಾಡುತ್ತಿದ್ದುದಲ್ಲದೇ, ಒಂದು ತರದಲ್ಲಿ ನಮ್ಮ ನಿರ್ಧಾರಗಳನ್ನು ನಾವೇ ತೆಗೆದುಕೊಳ್ಳುವ ಮತ್ತು ಅಂದುಕೊಂಡದ್ದನ್ನು ಹಾಗೆಯೇ ಚಾಚೂ ತಪ್ಪದಂತೆ ನಿರ್ವಹಿಸುವ ಹೊಣೆಗಾರಿಕೆ ಹಾಗೂ ಮನೋಭಾವನೆಯನ್ನು ಬೆಳೆಸುವಲ್ಲಿ ಸಹಕಾರಿಯಾಯಿತು. ಇದರಿಂದ ನಮಗೆ ಬೇಕಾದುದೇನು? ಎಂಬುದನ್ನು ಆಯ್ಕೆ ಮಾಡುವ ಅವಕಾಶ ನಮ್ಮದೇ ಎನ್ನುವುದು ತಿಳಿಯಿತು.

ಇನ್ನೊಂದು 'ಡಿಸಿಪ್ಲೀನರಿ' ಅಂದರೆ ಶಿಸ್ತು ಪರಿಪಾಲನೆಗೆ ಸಂಬಂಧಿಸಿದ್ದು. ನಮಗೆ ಗೊತ್ತಿಲ್ಲದೆಯೇ ನ್ಯಾಯ, ನ್ಯಾಯಾಲಯದ ಮತ್ತು ನ್ಯಾಯಾಧೀಶರ ಘನತೆಯ ಬಗೆಗೆ ಅರಿವು ಮೂಡಿಸುತ್ತಾ ನಮ್ಮನಮ್ಮಲ್ಲೇ Value Judgement ಅನ್ನು ಬೆಳೆಸುವಲ್ಲಿ ನೈತಿಕ ಹೊಣೆಗಾರಿಕೆಯೊಂದಿಗೆ ಸಾಮಾಜಿಕ ಪ್ರಜ್ಞೆಯನ್ನು ಹುಟ್ಟುಹಾಕುವಲ್ಲಿ ಸಹಾಯಕವಾಯಿತು. ಅದೇನೆಂದರೆ ನಮ್ಮ ಗುಂಪೇ ಒಂದು ಅತ್ಯುಚ್ಛ ನ್ಯಾಯಾಲಯ ಎಂಬಂತೆ ಪರಿಭಾವಿಸಿ, ನಮ್ಮಲ್ಲಿ ಯಾರಾದರೂ ತಪ್ಪು ಮಾಡಿದ್ದರೆ ಸರಿಯಾವುದು ? ಮಾಡಿದ ತಪ್ಪಿಗೆ ಶಿಕ್ಷೆಕೊಡಬೇಕೇ ಅಥವಾ ಬೇಡವೇ? ಒಂದು ಪಕ್ಷ ಶಿಕ್ಷೆಯನ್ನು ವಿಧಿಸುವುದಾದರೆ ಅದರ ಸ್ವರೂಪ ಎಂಥದ್ದಿರಬೇಕು? ಎಷ್ಟು? ಎಂಬುದನ್ನು ಚರ್ಚಿಸುವುದು. ಅದನ್ನು ಪ್ಯಾಟ್ರೋಲ್‌ನ ಲೀಡರ್ಸ್ ನಾಲ್ಕು ಜನ ಒಂದೆಡೆ ಕುಳಿತು ಜ್ಯೂರಿ ಅಥವಾ ನ್ಯಾಯಾಸ್ಥಾನದಂತೆ ತಿಳಿದು ನಾವೇ ತೀರ್ಮಾನಗಳನ್ನು ತೆಗೆದುಕೊಂಡು ನ್ಯಾಯ ನಿರ್ಣಯ ಮಾಡುವುದು. ಆ ತೀರ್ಮಾನವೇ ಅಂತಿಮವಾಗಿತ್ತು. ಅದನ್ನು ಎಲ್ಲರೂ ಗೌರವಿಸಬೇಕಾಗಿತ್ತುಕೂಡ. ಮೇಲ್‌ನೋಟಕ್ಕೆ ಇದೊಂದು ಮಕ್ಕಳಾಟಿಕೆಯಂತೆ ಅನ್ನಿಸಿದರು ಇದರಲ್ಲಿ ಸಾಕಷ್ಟು ವಿಚಾರ ವಿನಿಮಯಗಾಳಾಗುತ್ತಿದ್ದಿತ್ತಲ್ಲದೆ ಯಾವುದೇ ಪೂರ್ವಗ್ರಹವಿಲ್ಲದೆಯೇ ಮುಕ್ತವಾಗಿ ನಾವೇ ನಮ್ಮ ಸರಿ-ತಪ್ಪುಗಳನ್ನು ವಿಶ್ಲೇಷಿಸಲು ಸಾಧ್ಯವಾಗುತ್ತಿತ್ತು. ಹಾಗೆಯೇ ಇದೊಂದು ತರಹ ಆತ್ಮಾವಲೋಕನಕ್ಕೂ ಅವಕಾಶ ಮಾಡಿಕೊಡುತ್ತಿತೆಂಬುದು ನಿಜ. ಕಾರಣ, ಶಿಕ್ಷೆಯನ್ನು ವಿಧಿಸಬೇಕಾಗಿದ್ದಂತಹ ವ್ಯಕ್ತಿ ಅಂತಹ ತಪ್ಪನ್ನು ಈ ಹಿಂದೆ ತಾನು ಮಾಡಿರಬಾರದು. ಹಾಗೆಯೇ ಅಂತಹ ತಪ್ಪುಗಳನ್ನು ಮುಂದೆ ತಾನು ಮಾಡಬಾರದು. ಅಂತಯೇ ತಪ್ಪು ಮಾಡಿದಾಗ ಶಿಕ್ಷೆಯನ್ನನುಭವಿಸ ಬೇಕಾಗುತ್ತದೆಂಬ ಎಚ್ಚರವನ್ನು ಮೂಡಿಸುತ್ತಿತ್ತು. ಅಲ್ಲದೆ ನ್ಯಾಯಕ್ಕೆ ಯಾರಾದರೂ ತಲೆಬಾಗಲೇ ಬೇಕೆನ್ನುವುದನ್ನು ಕಲಿಸುತ್ತಲೆ ಒಂದು ರೀತಿಯಲ್ಲಿ ನಮ್ಮ ಗುಂಪೇ ಅವಕಾಶವೀಯುತ್ತ ಸರಿದಾರಿಯತ್ತ ಸಾಗುವಂತೆ ಮಾಡುವ ಪ್ರಕ್ರಿಯೆ ಇದಾಗಿತ್ತೆಂದು ಇವತ್ತು ಅನಿಸುತ್ತಿದೆ. ತಿಳಿಯವ ಮೊದಲೆ ಸರಿಯಾದುದನ್ನು ಸರಿಯಾಗಿ ಕಲಿಸುವ ಕಲೆ ಸ್ಕೌಟ್‌ನಲ್ಲಿದೆ. ಅದನ್ನು ವ್ಯವಸ್ಥಿವಾಗಿ ರೂಪಿಸಿ- ಬಳಸಿದವರು ನಮ್ಮ ಸರ್ ಎಂಬ ಗೌರವವೂ ಅವರ ಬಗೆಗೆ ಮೂಡಿದೆ.

ಯಾರಾದರೂ ಏನನ್ನಾದರೂ ಹೇಳಿದರೆ ಅದನ್ನು ಹಾಗೆಯೇ ಸರಿಯಾಗಿ ಕೇಳಿಕೊಂಡು ಅವರು ಹೇಳಿದ್ದನ್ನು ಮೊದಲು ಮಾಡಬೇಕು. ಆ ಕಾರ್ಯದ ಬಗೆಗೆ ಏನಾದರೂ ಸಂದೇಹಗಳಿದ್ದರೆ ಅಥವಾ ಪ್ರಶ್ನೆಗಳಿದ್ದರೆ ನಂತರ ಕೇಳಬೇಕೆನ್ನುವದನ್ನು ಸರ್ ಹೇಳುತ್ತಿದ್ದರು. ಹಾಗೆಯೇ ನಾವು ಅದನ್ನು ಪರಿಪಾಲಿಸಬೇಕಾಗಿತ್ತು. ಏಕೆಂದರೆ ಹೇಳುವವರು ಸಾಕಷ್ಟು ಅದರ ಬಗೆಗೆ ಯೋಚನೆ ಮಾಡಿಯೇ ಹೇಳಿರುತ್ತಾರೆ ಎನ್ನುವ ನಂಬಿಕೆ, ಹೇಳಿದನ್ನು ಕೇಳಬೇಕೆನ್ನುವ ಗುಣ ಮತ್ತು ಅದನ್ನು ಮಾಡುವದರ ಮೂಲಕ ಅವರ ಆ ಮಾತುಗಳಿಗೆ ಗೌರವವನ್ನು ಸಲ್ಲಿಸಬೇಕೆನ್ನುವ ವಿನಯ ಇವೆಲ್ಲವನ್ನೂ ಇದು ಕಲಿಸುತ್ತಿತ್ತು. ಹಾಗೆಯೇ ಆನಂತರ ನಮ್ಮ ಸಂದೇಹಕ್ಕೂ ಉತ್ತರ ದೊರೆಯುವ ಭರವಸೆ ಕೂಡ ಇಲ್ಲಿತ್ತು. ಸರ್ ಅವರ ಈ ಕ್ರಮ ನಮ್ಮಲ್ಲಿ ಕೇಳ್ಮೆಯನ್ನು ಬೆಳೆಸಿತಲ್ಲದೇ ಒಂದು ರೀತಿಯಲ್ಲಿ ನಾಲಿಗೆ ನಮ್ಮನ್ನು ಕಿವುಡರನ್ನಾಗಿಸುವುದನ್ನು ತಪ್ಪಿಸುವ ಮಾರ್ಗವಾಗಿದ್ದು ಸಾಮಾನ್ಯ ಸಾಮಾಜಿಕ ನಡವಳಿಕೆಯನ್ನು ಡೆವಲಪ್ ಮಾಡಿತು. ಇಲ್ಲಿ ಕರ್ತವ್ಯ ಪ್ರಜ್ಞೆಯನ್ನು ಬೆಳೆಸುತ್ತಾ ಕಾರ್ಯಕೌಶಲ್ಯತೆಯನ್ನು ಸಮರ್ಥಿಸುವುದರೊಂದಿಗೆ ಅನಾವಶ್ಯಕವಾಗಿ ನಮ್ಮಲ್ಲಿ ಬೆಳೆಯ ಬಹುದಾಗಿದ್ದ ನಾನು ಎಂಬ ಅಹಂಗೆ ಅವಕಾಶವೀಯದಂತೆ ಮಾಡಿದ್ದು ಒಂದು ರೀತಿಯಲ್ಲಿ ಒಳ್ಳೆಯದೆ ಆಯಿತು.

ಸ್ಕೌಟ್‌ನಲ್ಲಿ ಬರೀ ತರಬೇತಿ, ಪಾಠ, ಆಟೋಟ, ಶಿಸ್ತು ಇವನ್ನಷ್ಟೇ ಕಲಿಬೇಕೆನೋ ಎನ್ನುವವರಿಗೊಂದು ಮಾತು. ಇದು ನಮಗೆ ಒಳ್ಳೆಯ ಗೆಳೆಯರನ್ನು ಕೂಡ ನೀಡುತ್ತದೆ. ಬಾಳಿನ ನಿಸ್ಸಾರತೆಯನ್ನು ಹೊಗಲಾಡಿಸಿ ಅದನ್ನು ಸುಂದರಗೊಳಿಸುವ, ನಮ್ಮ ಸುಖ-ದುಃಖಗಳನ್ನು ಹಂಚಿಕೊಳ್ಳುವ, ನಮ್ಮ ತಪ್ಪುಗಳನ್ನು ತಿದ್ದುವ ನಮ್ಮೊಡನೆ ನಮ್ಮಂತೆಯ ನಕುನಲಿಯುತಾ ನಮ್ಮನ್ನು ಬೆಳೆಸುವ ಸ್ನೇಹಿತರು ಯಾರಿಗೇ ಬೇಡ!

ಯಾವುದೇ ಜಾತಿ, ಮತ ಪಂಥದ ಭೇದವಿಲ್ಲದೆ ನಾವೆಲ್ಲಾ ಒಂದಾಗಿ ಬೆರೆಯುತ್ತೇವೆ. ಕೂಡಿ ಆಡುತ್ತೇವೆ. ದಿನದಿನ ಜತೆಯಾಗಿ ಸ್ಕೌಟ್‌ನ ಕಾರಣದಿಂದ ಸದ್‌ವಿಚಾರ ವಿನಿಮಯಗಳನ್ನು ಮಾಡಿಕೊಳುತ್ತಾ ನಿರ್ಧಿಷ್ಟ ಹಾದಿಯಲ್ಲಿ, ನಿರ್ಧಿಷ್ಟ ದಿಕ್ಕಿನತ್ತ ಹೆಜ್ಜೆಹಾಕುತ್ತೇವೆ. ಸಹಜವಾಗಿಯೇ ನಮ್ಮ ಅಂತರಂಗದ ಅಂತರಾಳವನ್ನು ಮೀಟಿ ಶೃತಿಮಾಡಿ 'ನಾದ' ಹೊರಡಿಸಿ ಆನಂದದಲ್ಲಿ ತೇಲುವಂತೆ ಮಾಡುವ ಜೀವನದುದ್ದಕ್ಕೂ ಪರಸ್ಪರರಲ್ಲಿ ಒಂದಲ್ಲಾ ಒಂದು ರೀತಿ Contact ಇಟ್ಟುಕೊಳ್ಳಲೇ ಬೇಕೆನ್ನುವ ಹಂಬಲವನ್ನು ಸದಾಕಾಲ ಉಳಿಸುವ ಸ್ನೇಹಿತರು ನಮಗೆ ದೊರೆಯುತ್ತಾರೆ. ಖಂಡಿತ ನಿವೇನೆ ಹೇಳಿ ಇವತ್ತಿಗೂ ನನಗೆ ನನ್ನ ಸ್ಕೌಟ್‌ನ ಗೆಳೆಯರು ಆತ್ಮೀಯರಾಗೆ ಉಳಿದಿದ್ದಾರೆ. ಇದು ನನಗೆ ಅತ್ಯಂತ ಹೆಮ್ಮೆ ಎನ್ನಿಸುತ್ತದೆ.

ಪಯೋನೀರ್ ಪ್ರಾಜೆಕ್ಟ್ ಮಾಡುವುದನ್ನು ಸಹಿತ ಕಲಿಸಿದವರು ನಮ್ಮ ಗುರುಗಳೇ, ಮರದ ಪೋಲ್ಸ್ ಮತ್ತು ಹಗ್ಗವನ್ನು ಬಳಸಿ ನಾವು (ಬಹಳ ದೊಡ್ಡ) ಪ್ರಾಜೆಕ್ಟ್ ಕಟ್ಟ ಬೇಕಾಗಿತ್ತು. ಅದೊಂದು ಸ್ಕೌಟ್‌ನ ಬಹುದೊಡ್ಡ ನೈಪುಣ್ಯತೆ. ಅಲ್ಲಿ ನಿರ್ಧಿಷ್ಟ ಸಮಯದಲ್ಲಿ ಟೀಮ್‌ನ್ನು ಸೇರಿಸಿಕೊಂಡು ಕೆಲಸ ಮಾಡಬೇಕಾಗಿದ್ದಿತು. ಮೊದಲು ಕಟ್ಟಿದಾಗ ನಾವು ಎರಡೂವರೆ ಗಂಟೆ ತೆಗೆದುಕೊಂಡಿದ್ದೆವು. ೨ನೆಯ ಬಾರಿ ಒಂದುವರೆ ಗಂಟೆಗೆ ಅದನ್ನು ಮುಗಿಸಿದ್ದೆವು. ಆದರೆ ರಾಜ್ಯಮಟ್ಟದ (ಮೈಸೂರಿನಲ್ಲಿ) ಜಾಂಬೂರಿನಲ್ಲಿ ನಾವು ಕೇವಲ ೪೫ ನಿಮಿಷಕ್ಕೆ ಪಯೋನೀರ್ ಪ್ರಾಜೆಕ್ಟ್ ಅನ್ನು ಮುಗಿಸಿದೆವು. ಅಲ್ಲೊಬ್ಬರು ಪಾಲ್ ಅಂತ ೧೨೦ ಕೆ. ಜಿ. ತೂಕ ಇದ್ದವರು ಆದರ ಒಂದೊಂದೇ ಮೆಟ್ಟಿಲು ಹತ್ತಿ ಮೇಲಿನ ತನಕ ಹೋಗಿ ತಾನು ಬೀಳದಿದ್ದಾಗ (ಅದುಮುರಿದು) ಚೆನ್ನಾಗಿ ಕಟ್ಟಿದ್ದೀರೆಂದು ನಮ್ಮ ಬೆನ್ನು ತಟ್ಟಿದರು. ಅಲ್ಲಿ ಆ ಸ್ಪರ್ಧೆಯಲ್ಲಿ ನಮಗೆ ಮೊದಲ ಬಹುಮಾನ ಲಭಿಸಿತು. ಇದನ್ನೆಲ್ಲಾ ಯಾಕೆ ಹೇಳುತ್ತಿದ್ದೇನೆ ಎಂದು ಅನಿಸುತ್ತಿದೆಯಾದರು ಸ್ಕೌಟ್ ಹೇಗೆ ಮಕ್ಕಳಲ್ಲಿ ಆತ್ಮವಿಶ್ವಾಸ, ಜವಾಬ್ದಾರಿ, ಗುರಿ, ಕಾರ್ಯಶೀಲತೆ, ನೈಪುಣ್ಯತೆ, ಸಾಂಸ್ಕೃತಿಕ ಮನೋಭಾವ ಸಮಯ ಪ್ರಜ್ಞೆ ಒಗ್ಗಟ್ಟು ಇತ್ಯಾದಿಗಳನ್ನು ಬೆಳೆಸುತ್ತದೆ. ಹಾಗೆಯೇ ಒಬ್ಬ ಒಳ್ಳೆಯ ಸ್ಕೌಟ್‌ಮಾಸ್ಟರ್ ಹೇಗೆ ತನ್ನ ಮಕ್ಕಳನ್ನು ತಿದ್ದಿ ಜೀವನದಲ್ಲಿ ಅವರು ಮುಂದೆ ಬರುವುದಕ್ಕೆ ಸಹಾಯಕನಾಗುತ್ತಾನೆ, ತಾನು ಬದುಕಿ ಇತರರೂ ಬದುಕುವುದಕ್ಕೆ ಬಿಡಲು ಮಕ್ಕಳ ಮನೋಭೂಮಿಕೆಯನ್ನು ಸಿದ್ಧಪಡಿಸುತ್ತಾನೆಂಬುದನ್ನು ಅಗತ್ಯವಾಗಿ ನಾನು ಹೇಳಬೇಕಿದೆ.

ಹಾಗೆಯೇ ಷಡಕ್ಷರಿ ಸರ್ ಹೇಳಿದೂ ಚಿಕ್ಕದಾಗಿ, ಚೊಕ್ಕವಾಗಿ ಪ್ರೀತಿಯಿಂದ, ನಮಗೆ ಅರ್ಥವಾಗುವಂತೆ ತಿಳಿಸಿ ಹೇಳುತ್ತಿದ್ದರು. ಅವರು ನಮ್ಮಲ್ಲಿ ತೋರುತ್ತಿದ್ದ ಕಾಳಜಿ ಮತ್ತು ಪ್ರೀತಿಯೂ ಇವತ್ತೂ ನಮ್ಮನ್ನು ಒಂದು ರೀತಿಯಲ್ಲಿ ಕಾಯುತ್ತಿದೆ. ಹೇಳಿದ್ದು ಪರಿಣಾಮಕಾರಿಯಾಗಿ ನಮ್ಮ ಎದೆಯಾಳದಲ್ಲಿ ಉಳಿಯುವಂತೆ ಕಥೆಗಳನ್ನು ಕೂಡ ಹೇಳುತ್ತಿದ್ದರು. ಅವರು ಹೇಳುತ್ತಿದ್ದ ಕಥೆಗಳಲ್ಲಿ ಒಂದು ಅತ್ಯಂತ ಜನ ಪ್ರಿಯವಾದದ್ದು ಈ ರೀತಿಯಿದೆ.

ಒಂದು ಸಾರಿ ಅಮೆರಿಕಾದ ಒಬ್ಬ ಯಾತ್ರಿಕ ಇಂಗ್ಲೆಂಡಿಗೆ ಹೋಗುತ್ತಾನೆ. ಅಲ್ಲಿ ಅವನು ಒಂದು ಸ್ಥಳಕ್ಕೆ ಹೋಗಬೇಕಾಗಿರುತ್ತದೆ. ಆದರೆ ಅವನಿಗೆ ದಾರಿ ಗೊತ್ತಿರುವುದಿಲ್ಲ. ಸ್ವಲ್ಪ ದೂರದಲ್ಲಿ ಎದುರಿಗೆ ಒಬ್ಬ ಪುಟ್ಟ ಬಾಲಕ ಕಾಣಿಸುತ್ತಾನೆ. ಆಗ ಕೂಡಲೇ ಆ ಯಾತ್ರಿಕ ಆ ಬಾಲಕನ ಸಹಾಯವನ್ನು ಕೋರುತ್ತಾನೆ. ಪುಟ್ಟ ಬಾಲಕ ಸಂತೋಷದಿಂದ ಯಾತ್ರಿಕ ಹೋಗಬೇಕಾಗಿದ್ದ

ಸ್ಥಳವನ್ನು ತೋರಿಸುತ್ತಾನೆ. ಅದರಿಂದ ಸಂತೃಪ್ತನಾದ ಯಾತ್ರಿಕ ತಾನು ಪಡೆದ ಸಹಾಯಕ್ಕೆ ಪ್ರತ್ಯುಪಕಾರವಾಗಿ ಆ ಬಾಲಕನಿಗೆ ಹಣವನ್ನು ನೀಡಲು ಮುಂದಾಗುತ್ತಾನೆ.

ಬಾಲಕ ಅದನ್ನು ನಿರಾಕರಿಸುತ್ತಾ ಇದೊಂದು Good turn ನನಗೆ, ಏಕೆಂದರೆ ನಾನೊಬ್ಬ ಸ್ಕೌಟ್ ಎಂದು ಉತ್ತರಿಸುತ್ತಾನೆ. ಯಾತ್ರಿಕ ಹಾಗಾದರೆ ಸ್ಕೌಟ್ ಎಂದರೇನು? ಎಂದು ಆ ಪುಟ್ಟ ಬಾಲಕನನ್ನು ಪ್ರಶ್ನಿಸಿದಾಗ ಅವನು ನೀಡಿದ ಉತ್ತರ 'ನನಗೆ ಗೊತ್ತಿಲ್ಲ' ಎಂಬುದು. ಇದು ಇಷ್ಟಕ್ಕೇ ಮುಗಿದಿದ್ದರೆ ಅದರಲ್ಲೇನೂ ವಿಶೇಷತೆ ಇರುತ್ತಿರಲಿಲ್ಲ. ಬದಲಿಗೆ ಆ ಬಾಲಕ ಮಧ್ಯಾಹ್ನ ಆ ಯಾತ್ರಿಕನನ್ನು ನಮಗೆ ಸ್ಕೌಟ್ ಹೇಳಿಕೊಡುವ ಮುಖ್ಯಸ್ಥರೊಬ್ಬರಿದ್ದಾರೆ ಅವರನ್ನು ನಿಮಗೆ ತೋರಿಸುತ್ತೇನೆ. ಹಾಗೆಂದರೇನೆಂಬ ಪ್ರಶ್ನೆಯನ್ನು ಅವರನ್ನು ಕೇಳಿ. ತಿಳಿಯಿರಿ ಎನ್ನುತ್ತಾ ಸ್ಕೌಟ್ ಕ್ವಾರ್ಟಸ್ ಹತ್ತಿರ ಕರೆದುಕೊಂಡು ಹೋಗಿ ಬಿಡುತ್ತಾನೆ.

"ಸ್ಕೌಟ್ಎಂದರೆ ಕರ್ತವ್ಯವನ್ನು ಪ್ರೀತಿಯಿಂದ ಮಾಡುವುದು ನಿನ್ನ ಹಕ್ಕು. ಒಳ್ಳೆಯದನ್ನು ಮಾಡು ಆದರೆ ಅದಕ್ಕಾಗಿ ಎಂದೂ ಪ್ರತಿಫಲಾಪೇಕ್ಷೆಯನ್ನು ಇಟ್ಟುಕೊಳ್ಳಬೇಡ" ಎಂಬ ಸಂದೇಶವನ್ನು ಸಾರುವಂಥದ್ದು.

ಆಮೇಲೆ ಆ ಯಾತ್ರಿಕ ಇಂಗ್ಲೆಂಡ್ ದೇಶದಲ್ಲಿ ಆ ಸ್ಕೌಟ್ ಮುಖ್ಯಸ್ಥನಿಂದ ಅದರ ಬಗೆಗೆ ಸಾಕಷ್ಟು ತಿಳಿದು, ಅದರ ಬಗೆಗಿನ ಪುಸ್ತಕ ಜ್ಞಾನ, ಸಾಮಗ್ರಿಗಳನ್ನು ಹೊತ್ತು ತಾಯ್ನಾಡಿಗೆ ವಾಪಾಸ್ಸಗುತ್ತಾನೆ.

ಹೀಗೆ ಅಮೆರಿಕಾಗೆ ತಿರುಗಿ ಬಂದು ಅಲ್ಲಿ ಸ್ಕೌಟ್‌ನಂತಹ ಸಂಘಟನೆಯನ್ನು ಆ ಯಾತ್ರಿಕ ಕಟ್ಟಿದ. ಈ ಹೊತ್ತು ವಿಶ್ವದಲ್ಲೇ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ವ್ಯವಸ್ಥಿತವಾಗಿ ಸ್ಕೌಟ್ ಮತ್ತು ಗೈಡ್ಸ್ ಸಂಘಟಿತವಾಗಿರುವುದು ಅಮೆರಿಕಾದಲ್ಲಿ.

ಅಮೆರಿಕಾದಲ್ಲಿ ಅವನು ಶುರುಮಾಡಿದ ಸ್ಕೌಟಿಂಗ್ ಅಜ್ಞಾತ ಸ್ಕೌಟಿಂಗ್ ಈ ಹೊತ್ತು ಅಸದೃಶ್ಯವಾಗಿ ಬೆಳೆದಿರುವ ಅಥವಾ ಆ ಆಂದೋಲನಕ್ಕೆ ಸಹಾಯ ಮಾಡಿದ್ದು ಒಬ್ಬ ಪುಟ್ಟ ಬಾಲಕ. ಒಬ್ಬ ಪುಟ್ಟ ಅಜ್ಞಾತ ಬಾಲಕನ ಸಣ್ಣ ಸಹಾಯದಿಂದ ಪ್ರಾರಂಭವಾಗಿದ್ದು ಮಹತ್ತಾಗಿ ಬೆಳೆದು ತನ್ನವರೆಲ್ಲರನ್ನು ಬೆಳೆಸುತ್ತಿದೆ. ಹೀಗೆ ಅಲ್ಲದೇ ಎಲ್ಲೋ ಯಾರಿಂದಲೋ ಅಜ್ಞಾತವಾಗಿ ಹುಟ್ಟಿದೊಂದು ಬಿಂದು ಹನಿ, ಪುಟ್ಟತೊರೆಯಾಗಿ, ಹಳ್ಳವಾಗಿ, ನದಿಯಾಗಿ, ಸಿಂಧುವಾಗಿ ಬಿಡುವುದು. ಜನಪದರ ಜೀವದಾತುವಾಗಿ ಬತ್ತದ ಗಂಗೆಯಾಗುವುದು. ಇಂತಹ ಎಷ್ಟೋ ಕಥೆಗಳನ್ನು ಹೇಳಿದ ಷಡಕ್ಷರಿ ಸರ್‌ಗೆ ನನ್ನ ಕೃತಜ್ಞತೆಗಳು.

ಅಂದಿನ ಎಷ್ಟೋ ವಿಷಯ, ಘಟನೆ, ಮಾತು, ಆಟ, ಪಾಠಗಳು ಇವತ್ತು ನೂರು ಭಾವ, ನೂರಾರು ಅರ್ಥಗಳನ್ನು ಸ್ಫುರಿಸುತ್ತಾ ಬಾಳಿಗೊಂದು ಸುಂದರ ನೆನಪಿನ ಬುತ್ತಿಯನ್ನು ನನಗೆ ಕಟ್ಟಿಕೊಟ್ಟಿದೆ ಎನ್ನಲೇ ?.

ಇತ್ತೀಚೆಗೆ ಅಂದರೆ ೨೦೦೧ರಲ್ಲಿ ರೋಟರಿ ಸಂಸ್ಥೆಯ Group Study Exchange Team (GSET) ನಲ್ಲಿ ಒಬ್ಬ ಸದಸ್ಯನಾಗಿ ನಾನು ಆಯ್ಕೆಯಾದುದರ ಫಲವಾಗಿ ಅಮೇರಿಕಾದೇಶಕ್ಕೆ ಬೇಟಿ ನೀಡುವ ಸದವಕಾಶ ನನ್ನದಾಗಿತ್ತು. ಅಲ್ಲಿ ಅದೃಷ್ಟವಶಾತ್ ನಾನು ತಂಗಿದ ಕುಟುಂಬ ಒಂದು ಸ್ಕೌಟ್ ಕುಟುಂಬ ವಾಗಿತ್ತು. ಅಶ್ಚರ್ಯವೆಂದರೆ ಆ ಮನೆಯವರೆಲ್ಲರೂ ಸ್ಕೌಟ್ ಆಗಿದ್ದುದು. ತಂದೆ, ತಾಯಿ, ಪೋಷಕರೆಲ್ಲರೂ, ಡಾಕ್ಟರ್ ಸೇರಿದಂತೆ ಎಲ್ಲರೂ ಸ್ಕೌಟ್ ಯೂನಿಫಾರಂ ಹಾಕಿದ್ದು ಖುಷಿ ನೀಡಿತು. ಹಾಗೆಯೇ ಇಂತಹ awareness ನಮ್ಮಲ್ಲಿ ಯಾವಾಗ ಮೂಡುತ್ತದೊಎನ್ನುವ ಪ್ರಶ್ನೆ ಕೂಡ ನನ್ನನ್ನು ಕಾಡಿದ್ದು ನಿಜ.

ಷಡಕ್ಷರಿ ಸರ್ ಹೇಳ್ತಿದ್ರು, ಧ್ವಜಕ್ಕೆ ಗೌರವ ತೋರಿಸ ಬೇಕು, ಅದನ್ನು ನೆಲಕ್ಕೆ ಮುಟ್ಟಿಸಬಾರದು. ನಾವು ಹಾಗೆಯೇ ಮಾಡುತ್ತಿದ್ದೆವು. ಆಗ ಸ್ಕೌಟ್ಸ್ ಲಾ ನಲ್ಲಿ ೧೦ ಅಂಶಗಳಿತ್ತು.

ಆ ನಿಯಮಗಳನ್ನೇ ನಾವು ನಮ್ಮ ಜೀವನವೆಂದು ನಂಬಿದ್ದೆವು. ಅಂದರೆ ಇನ್ನು ಹೇಗೆ ಒಬ್ಬ ಗುರು ತನ್ನ ಶಿಷ್ಯರನ್ನು ಪ್ರಭಾವಿಸಬಹುದು ಹೇಳಿ.

ಸ್ಕೌಟ್ ಶಾಲೆಯಲ್ಲಿ ಸರ್ ಒಂದು ದೊಡ್ಡ ಬಾಕ್ಸ್ ಅನ್ನು ಇಟ್ಟು ನಮಗೆ ಸ್ಕೌಟ್‌ಗೆ ಬೇಕಾದಂತಹ ಪುಸ್ತಕ, ಬ್ಯಾಡ್ಜ್ ಮೊದಲಾದ ಹಲವು ಸಾಮಗ್ರಿಗಳನ್ನು ಹಾಕಿರುತ್ತಿದ್ದರು. ನಮ್ಮಲ್ಲಿ ಯಾರಿಗೆ ಯಾವ ವಸ್ತು ಬೇಕೋ ಅದನ್ನು ಧಾರಾಳವಾಗಿ ತೆಗೆದುಕೊಳ್ಳಬಹುದಿತ್ತು. ಇಲ್ಲಿ ಹೇಳುವ ಕೇಳುವ ಪ್ರಮೇಯವಿರುತ್ತಿರಲಿಲ್ಲ. ಆದರೆ ಒಂದು ಷರತ್ತನ್ನು ಪಾಲಿಸಬೇಕಾಗಿತ್ತು. ಅದೇನಂದರೆ ನಾವು ವಸ್ತುಗಳನ್ನು ತೆಗೆದುಕೊಳ್ಳುವಾಗ ಆ ವಸ್ತುವಿಗೆ ತಗಲುವ ಬೆಲೆಯಷ್ಟು ಹಣವನ್ನು ಆ ಬಾಕ್ಸಿನಲ್ಲಿ ಹಾಕಬೇಕಾಗಿತ್ತು. ಇದು ವ್ಯಾಪಾರ ಅಥವಾ ವ್ಯವಹಾರವಾಗಿರಲಿಲ್ಲವೆಂಬುದೇ ಅದರ ಹೆಗ್ಗಳಿಕೆ.

ಈ ಮೊದಲೇ ಹೇಳಿದಂತೆ ನಾನು ಸ್ಕೌಟ್ಸ್ ವಿದ್ಯಾರ್ಥಿ ಯಾಗಿದ್ದಾಗ ಸ್ಕೌಟ್‌ನ ಕಾನೂನಿನಲ್ಲಿ ಹತ್ತು ಅಂಶಗಳಿತ್ತು. ಅದರಲ್ಲಿನ ಮೊದಲನೇ ನಿಯಮವೇ 'ಸ್ಕೌಟ್‌ನ ಗೌರವವು ವಿಶಾಸಾರ್ಹವಾದುದು' ಎಂಬುದು ಇದನ್ನು ಆ ಬಾಕ್ಸ್ ಮೂಲಕ

ನಾವು ಕಲಿತೆವೆಂದೇ ಹೇಳಬೇಕು. ಏಕೆಂದರೆ ಇಲ್ಲಿ ಪರಸ್ಪರರಲ್ಲಿ ನಂಬಿಕೆ ಮತ್ತು ವಿಶ್ವಾಸವನ್ನು ಹುಟ್ಟಿಸಿ ಕಾಪಾಡಿಕೊಂಡು ಅದನ್ನು ಹಾಗೆಯೇ ಬೆಳೆಸಿಕೊಳ್ಳುವುದಕ್ಕಾಗಿ ನಾವು ನಮ್ಮ ಮನಸ್ಸುಗಳನ್ನು ಪ್ರಾಮಾಣಿಕವಾಗಿ ತಿದ್ದಿಕೊಳ್ಳಬೇಕಾದಂತಹ ಅವಶ್ಯಕತೆ ಮತ್ತು ಅನಿವಾರ್ಯತೆ ಇದ್ದಿತು. ನಾವು ತೆಗೆದು ವಸ್ತುಗಳನ್ನು ಸಾಮಾನ್ಯವಾಗಿ ಯಾರು ನೋಡುತ್ತಿರಲಿಲ್ಲ. ಮೇಲಾಗಿ ಪುನಃ ಹಣವನ್ನು ಹಾಕಿದೆವೊ, ಇಲ್ಲವೋ ಎಂದು ಕೂಡ ಯಾರು ಕಣ್ಣಿಟ್ಟಿರುತ್ತಿರಲಿಲ್ಲ. ಆದರೂ ಉಚಿತವಾಗಿ ಪಡೆಯುವ, ಹಣವನ್ನು ಹಾಕದೆ ಹಾಗೆಯೇ ಬೇಕಾದ ವಸ್ತುವನ್ನು ಎತ್ತಿಕೊಂಡು ಬಿಡುವ ಅಥವಾ ಬೇಕಾಗಿಯೇ ಕಡಿಮೆ ಹಣವನ್ನು ಹಾಕುವ, ಹಾಕಿದಂತೆ ನಟಿಸಿ ಸುಮನ್ನಾಗುವ, ಉಡಾಫೆಯಿಂದ ಆತ್ಮವಂಚನೆ ಮಾಡಿಕೊಳ್ಳುವ, ದುರಾಸೆಯಿಂದ ವರ್ತಿಸುವ ಮನಸ್ಥಿತಿಯಿಂದ ಹೊರಬಂದು ನಂಬಿಕೆ ಮತ್ತು ಗೌರವಕ್ಕಾಗಿ, ಅದರ ಗುಣ ಮೌಲ್ಯಕ್ಕಾಗಿ ಮುಕ್ತವಾಗಿ ಸ್ಪಂದಿಸುತ್ತಿದ್ದೆವು. ಇದರಿಂದ ನಮ್ಮ ಎಳೆಯ ಮನಸ್ಸುಗಳಲ್ಲಿ ಆಡಿದ ಮಾತನ್ನು ಉಳಿಸಿಕೊಳ್ಳಬೇಕೆನ್ನುವ ಹಂಬಲ ನಮಗರಿವಿಲ್ಲದೆಯೇ ನಾವು ಹೊಂದಲು ಸಾಧ್ಯವಾಯಿತು. ನಮ್ಮೆಲ್ಲಾ ಸ್ಕೌಟ್ ವಿದ್ಯಾರ್ಥಿಗಳನ್ನು ಇಂತಹ ಪ್ರಾಯೋಗಿಕ ಪ್ರಾತ್ಯಕ್ಷಿಕೆಗಳಿಂದ ಸರ್ ಪಕ್ವಗೊಳಿಸುವಲ್ಲಿ ಶ್ರಮಿಸುತ್ತಿದ್ದುದನು ನಾನಿಲ್ಲಿ ಸ್ಮರಿಸುತ್ತಿದ್ದೇನೆ ಅಷ್ಟೇ.

೧೯೮೩ರಲ್ಲಿ ನಾನು ಸ್ಕೌಟ್ಸ್ ಬಿಟ್ಟೆ, ಆದರೆ ವಾಪಸ್ಸು ಹೋಗಿ, ಸ್ಕೌಟ್‌ಕುಟುಂಬದೊಂದಿಗೆ ಬೆರೆಯುತ್ತಿದ್ದೆ. ನನಗೆ ಗೊತ್ತಿದ್ದುದನ್ನು ಅಂದರೆ ನಾಟ್ಸ್, ಪ್ರಾಜೆಕ್ಟ್ ಮಾಡೋದು, ಆಟಗಳು, ವನ್ಯ ಜೀವಿ, ಇತ್ಯಾದಿಗಳ ಬಗೆಗೆ ಹೇಳಿಕೊಡುತ್ತಾ ನಾನೂ ಕಲಿಯುತ್ತಲಿದ್ದೆ, ಷಡಕ್ಷರಿ ಸರ್ ಹೇಳಿದ್ದು ನಿನ್ನ ಕೊಡುಗೆ ಒಂದು ಗುಂಪು ಅಥವಾ ಒಂದು ಸ್ಕೌಟ್‌ಗೆ ಸೀಮಿತವಾಗಬಾರದು. ಅವರ ಪ್ರೀತಿ ವಿಶ್ವಾಸ ಮತ್ತು ಪ್ರೇರಣೆ ಉತ್ತೇಜನಗಳ ಮೇರೆಗೆ ನಾನು ಇಂದು ಸ್ಕೌಟ್ಸ್‌ನ ಜಿಲ್ಲಾ ಕಾರ್ಯದರ್ಶಿಯಾಗಿದ್ದೇನೆ. ಅದು ನನ್ನ ದೃಷ್ಟಿ ಮತ್ತು ಜವಾಬ್ದಾರಿಗಳನ್ನು ಹೆಚ್ಚಿಸಿದೆ.

ಎಲ್ಲದಕ್ಕಿಂತಲೂ ಹೆಚ್ಚಾಗಿ ಸೌಟ್‌ಗೆ ನಾನು ಕೊಟ್ಟಿರುವುದಕ್ಕಿಂತ ಅದು ನನಗೆ ಹೆಚ್ಚಾಗಿ ಕೊಟ್ಟಿದೆ. ನನ್ನ ಅತ್ಯಂತ ಆಸಕ್ತ ಮತ್ತು ಆಪ್ತವಲಯವಾದ ಪರಿಸರ, ಪ್ರಕೃತಿಯ ಬಗೆಗೆ ಸ್ವಲ್ಪ ಪ್ರೀತಿಯನ್ನು ಬೆಳೆಸಿಕೊಳ್ಳಲು ಅವಕಾಶ ಮಾಡಿದೆ. ಸರ್, ಯಾವಾಗಲೂ ಸ್ಕೌಟ್ಸ್ ತರಬೇತಿಯನ್ನು ನಾಲ್ಕು ಗೋಡೆಗಳಿಂದ ಹೊರಗೆ ಅಂದರೆ ಪ್ರಕೃತಿ ಮಡಿಲಿನಲ್ಲಿ ನೀಡುತ್ತಿದ್ದರು. (ನೂರಾರು ಬರೀ ಸ್ಕೌಟ್ಸ್‌ಗಾಗಿ, ಕ್ಯಾಂಪ್‌ಗಾಗಿ) ಕಾಡಿನಲ್ಲಿ ಓಡಾಡುವ ಅವಕಾಶ ದೊರೆತಿವೆ. ಅದು ನನ್ನಲ್ಲಿ ಸುಪ್ತವಾಗಿದ್ದ ಪರಿಸರ ಪ್ರೀತಿಯನ್ನು ಜಾಗೃತಗೊಳಿಸಿದೆ. ಹಾಗೆಯೇ ಒಂದು ಹಕ್ಕಿ, ಒಂದು ಹೂ, ಒಂದು ಪುಟ್ಟಗಿಡ, ಯಾವುದೊ ಒಂದು ಮರ, ಇಲ್ಲಿ ಹರಿಯುವ ಒಂದು ಸಣ್ಣತೊರೆ, ವಿಶ್ವದ ಇನ್ನಾವುದೇ ಪರಿಸರ ಸಂಬಂಧಿ ಘಟನೆಗೆ ಕಾರಣವಾಗಬಹುದು ಅಥವಾ ಆಗುತ್ತದೆ. ಇದೆಲ್ಲಾ ನಮ್ಮದೆನ್ನುವ ಸ್ವಾರ್ಥ ತರವಲ್ಲ. ವಿಶ್ವದ ಇನ್ನಾವುದೋ ಪರಿಸರ ಸಂಬಂಧಿ ಘಟನೆಗೆ ಕಾರಣವಾಗಬಹುದು. ಅಥವಾ ಆಗುತ್ತದೆ. ವಿಶ್ವದಲ್ಲಿ ಈ ಪ್ರತಿಯೊಂದಕ್ಕೂ ಒಂದು ಅಂತರ್‌ಲಯವಿದೆ. ಹೊಂದಾಣಿಕೆಯಿದೆ. ಸಂಬಂಧವಿದೆ, ಸೆಳವಿದೆ ಎಂಬ ಅರಿವನ್ನು ಮೂಡಿಸಿಕೊಳ್ಳುವ ಹಾದಿಯಲ್ಲಿ ನಡೆಯುವಂತೆ ಮಾಡಿದೆ. ಇದಕ್ಕಿಂತ ಇನ್ನೇನು ಬೇಕು, ಸಾಕಲ್ಲವೇ ಇಷ್ಟು.



> ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಕಳುಹಿಸುತ್ತಿದ್ದೆ.
>
> - ಡಾ. ಅನಿ ಬೆಸೆಂಟ್

# ಸ್ಕೌಟಿಂಗ್ ನಡೆದು ಬಂದ ದಾರಿ

*ನೀಲಕಂಠಾಚಾರಿ*

೨೨-೨-೧೮೫೭ - ಸ್ಕೌಟ್ ಸಂಸ್ಥೆಯ ಸಂಸ್ಥಾಪಕರಾದ ಶ್ರೀ ರಾಬರ್ಟ್ ಸ್ಟಿಫನ್‌ಸನ್‌ಸ್ಮಿತ್ ಬೇಡನ್ ಪೊವೆಲ್ ಅವರ ಜನನ.

೧೮೮೭- ಬೇಡನ್ ಪೊವೆಲ್ ಅವರು ಆಫ್ರಿಕಾದಲ್ಲಿ ಜೂಲುಗಳ ವಿರುದ್ಧ ಹೋರಾಟ ಅಶಾಂತಿಯ ಕ್ರೂರ ಬುಡಕಟ್ಟು ಜನಾಂಗದವರೊಡನೆ ಅನಾಗರಿಕ ಮೆಟಾಬಲಿ ಯೋಧರೊಡನೆ ಯುದ್ಧ.

೧೮೯೯ ಬೇಡನ್ ಪೊವೆಲ್ ಅವರು ಕರ್ನಲ್ ಪದವಿಗೇರಿದ್ದು.

೧೩-೧೦-೧೮೯೯ ರಿಂದ ೧೮-೦೫-೧೯೦೦-೨೧೭ ದಿವಸಗಳು ದಕ್ಷಿಣ ಆಫ್ರಿಕಾದ ಮೇಫೆಕಿಂಗ್ ನಗರ ಮೇಲೆ ದಾಳಿ.

೧೯೦೧ - ಬೇಡನ್ ಪೊವೆಲ್ ಅವರು ಬರೆದ "ಏಯ್‌ಡ್ಸ್ ಟು ಸ್ಕೌಟಿಂಗ್" ಎಂಬ ಕೃತಿ ಪಠ್ಯ ಪುಸ್ತಕವಾಗಿ ಪ್ರಕಟವಾಯಿತು.

೧೯೦೭-ಇಂಗ್ಲಿಷ್ ಕಡಲ್ ಗಾಲುವೆಯ ಬದಿಯಲ್ಲಿರುವ "ಬ್ರೌನ್‌ಸಿ" ದ್ವೀಪದಲ್ಲಿ ಪ್ರಾಯೋಗಿಕ ಬಾಯ್ ಸ್ಕೌಟ್ ಶಿಬಿರ.

೧೯೦೮ - ಜನವರಿ ತಿಂಗಳಿನಿಂದ ಪಾಕ್ಷಿಕ ಒಂದರಲ್ಲಿ ಬೇಡನ್ ಪೊವೆಲ್ ಅವರು ಬರೆದ ಚಿತ್ರ ಸಹಿತ ಆರು ಭಾಗಗಳಲ್ಲಿ "ಸ್ಕೌಟಿಂಗ್ ಫಾರ್ ಬಾಯ್ಸ್" ಅನ್ನು ಪ್ರಕಟಿಸಿದರು.

೧೯೦೯ - ಕ್ಯಾಪ್ಟನ್ ಶ್ರೀ ಟಿ. ಎಚ್. ಬೇಕರ್ ಅವರು ಭಾರತ ಮೊದಲ ಸ್ಕೌಟ್ ದಳವನ್ನು ಆಗಿನ ಮೈಸೂರು ಸಂಸ್ಥಾನದ ಬೆಂಗಳೂರಿನಲ್ಲಿ ಪ್ರಾರಂಭಿಸಿದರು (ಬಿಷಪ್ ಕಾಟೋನ್ ಸ್ಕೂಲ್)

೧೯೦೯ - ಇಂಗ್ಲೆಂಡಿನ ಕ್ರಿಸ್ಟಲ್ ಅರಮನೆಯಲ್ಲಿ ಸ್ಕೌಟ್ ಬಾಲಕರ ಸಮಾವೇಶ ಮತ್ತು "ಗರ್ಲ್ ಗೈಡ್" ಪ್ರಾರಂಭ. ಇದರ ನಾಯಕಿಯಾಗಿ ಬಿ. ಪಿ.ಯವರ ಸಹೋದರಿ "ಆಗ್ನೇಸ್, ಪೊವೆಲ್ " ಅವರು ಆಯ್ಕೆಯಾದರು. ಇದೇ ವರ್ಷ ಆಗ್ನೇಸ್ ಪೊವೆಲ್ ಅವರು "ಹೌ ಗರ್ಲ್ ಕ್ಯಾನ್ ಹೆಲ್ಪದ ಎಂಪಾಯರ್ (How Girls help the Empir ) ಎಂಬ ಪುಸ್ತಕ ಪ್ರಕಟಿಸಿದರು.

೧೯೦೯ - ನವೆಂಬರ್ ಮಾಹೆಯಲ್ಲಿ ಬೆಂಗಳೂರಿನ ಸ್ಥಳೀಯ ಸಂಸ್ಥೆಯನ್ನು ಲಂಡನ್ನಿನ ಪ್ರಧಾನ ಕಛೇರಿಯಲ್ಲಿ ಅಧಿಕೃತವಾಗಿ ಕ್ಯಾಪ್ಟನ್ ಶ್ರೀ ಟಿ. ಎಚ್. ಬೇಕರ್‌ರವರು ನೊಂದಾಯಿಸಿದರು.

೧೯೧೧ - ಇಂಗ್ಲೆಂಡಿನ ದೊರೆ ಕಿಂಗ್ ಜಾರ್ಜ್ ಅವರು ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅಧಿಕ ಸಂಖ್ಯೆಯಲ್ಲಿ ಸ್ಕೌಟ್‌ಗಳ ಮತ್ತು ಕ್ಯಾಪ್ಟನ್ ಟಿ. ಎಚ್. ಬೇಕರ್ ಅವರು ಸೇರಿದಂತೆ ಅನೇಕ ಹಿರಿಯ ನಾಯಕರ ಸಮ್ಮೇಳನ ನಡೆಯಿತು.

೧೯೧೨ - ಬೇಡನ್ ಪೊವೆಲ್‌ರವರು ವಿವಿಧ ದೇಶಗಳ ಸ್ಕೌಟುಗಳನ್ನು ಪರಿಚಯಿಸಿಕೊಳ್ಳುವ ಉದ್ದೇಶದಿಂದ "ವಿಶ್ವ ಪರ್ಯಟನಾ ಯಾತ್ರೆ" ನಡೆಸಿದರು.

ಭಾರತದಲ್ಲಿ ಪ್ರಥಮ ಕೇಂದ್ರ ಕಛೇರಿಯನ್ನು ಸ್ಥಾಪಿಸಲಾಯಿತು. ಇದಕ್ಕೆ ಮದ್ರಾಸಿನ ಬ್ರಿಗೇಡಿಯರ್ ಜನರಲ್ ಶ್ರೀ ಎಫ್. ಜಿ. ಬಾರ್ ಪ್ರಧಾನ ಆಯುಕ್ತರಾಗಿಯೂ, ಬೆಂಗಳೂರಿನ ಕ್ಯಾಪ್ಟನ್ ಟಿ. ಎಚ್. ಬೇಕರ್ ಅವರು ಪ್ರಧಾನ

ಕಾರ್ಯದರ್ಶಿಯಾಗಿಯೂ ಆಯ್ಕೆಯಾದರು.

೧೦೧೩ - ಮಧ್ಯ ಪ್ರದೇಶದಲ್ಲಿ ಜಸ್ಟೀಸ್ ಶ್ರೀ ವಿ. ವಿ. ಎನ್. ಬೋಸ್ ಅವರು ಸ್ಕೌಟ್ ಸಂಸ್ಥೆ ಸ್ಥಾಪಿಸಿದರು.

೧೯೧೪ - ೭ರಿಂದ ೧೦ ವರ್ಷದೊಳಗಿನ ಮಕ್ಕಳಿಗೆ ಕಬ್ಬಿಂಗ್ ಪ್ರಾರಂಭವಾಯಿತು

೧೯೧೫ - ೧೬ ಮದ್ರಾಸಿನಲ್ಲಿ ಡಾ. ಅನಿಬೆಸೆಂಟ್ ಮತ್ತು ಜಿ. ಎಸ್. ಅರುಣ್ ಡೇಲ್ ಅವರು ಇಂಡಿಯನ್ ಬಾಯ್ಸ್ ಸ್ಕೌಟ್ ಅಸೋಸಿಯೇಷನ್ ಅನ್ನು ಸಂಘಟಿಸಿದರು.

೧೯೧೫ - ಬಂಗಾಳದಲ್ಲಿ ಶ್ರೀ ಜಿ. ಎಸ್. ವಿಲ್ಸನ್ ಮತ್ತು ಆಲ್ಫ್ರೆಡ್ ಫಿಕ್ ಅವರು ಸ್ಕೌಟ್ ಸಂಸ್ಥೆ ಸಂಘಟಿಸಿದರು.

೧೯೧೭ - ಮೈಸೂರು ಸಂಸ್ಥಾನದಲ್ಲಿ ''ದಿ ಬಾಯ್ಸ್ ಸ್ಕೌಟ್ಸ್ ಆಫ್ ಮೈಸೂರು'' ಎಂಬ ಸಂಸ್ಥೆ ಸ್ಥಾಪಿಸಲಾಯಿತು. ''ಶ್ರೀ ಕೃಷ್ಣ ರಾಜ ಒಡೆಯರ್'' ಅವರು ಮಹಾ ಪೋಷಕರಾಗಿದ್ದರು. ೧೯೧೭ನೆಯ ಅಕ್ಟೋಬರ್ ೩ರಂದು ಮೈಸೂರು ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ ಚಟುವಟಿಕೆ ಪ್ರಾರಂಭಿಸುವಂತೆ ರಾಜಾಜ್ಞೆ ಹೊರಡಿಸಿದರು.

೧೯೧೮ - ಉತ್ತರ ಪ್ರದೇಶದ ಅಲಹಾಬಾದ್‌ನಲ್ಲಿ ಶ್ರೀ ಪಂಡಿತ್ ಮದನ್ ಮೋಹನ್ ಮಾಳವೀಯ, ಶ್ರೀ ಪಂಡಿತ್ ಹೃದಯನಾಥ ಕುಂಜ್ರು ಮತ್ತು ಪಂಡಿತ್ ಶ್ರೀ ರಾಮಬಾಜಪಾಯಿ ಇವರುಗಳು '' ಸೇವಾ ಸಮಿತಿ ಸ್ಕೌಟ್'' ಸಂಸ್ಥೆಯನ್ನು ಸ್ಥಾಪಿಸಿದರು.

೧೯೨೦ - ಇಂಗ್ಲೆಂಡಿನ ಒಲಂಪಿಯಾ ನಗರದಲ್ಲಿ ಮೊಟ್ಟ ಮೊದಲ ವಿಶ್ವ ಜಾಂಬೂರಿ ನಡೆಯಿತು. ಇದೇ ಸಂದರ್ಭದಲ್ಲಿ ಬೇಡನ್ ಪೊವೆಲ್ ಅವರನ್ನು ''ವಿಶ್ವಪರಮ ಪ್ರಧಾನ ಸ್ಕೌಟ್'' (Chief Scout of the world)ಎಂದು ಘೋಷಿಸಲಾಯಿತು.

೧೯೨೦ - ಕರ್ನಾಟಕದ ಪ್ರಥಮ ಸ್ಕೌಟ್ ಜಾಂಬೊರೇಟ್, ಚಿಕ್ಕಮಗಳೂರಿನಲ್ಲಿ ನಡೆಯಿತು.

೧೯೨೧ - ಮದ್ರಾಸಿನಲ್ಲಿ ಫೆಬ್ರವರಿ ೯ ರಂದು ಡಾ. ಅನಿಬೆಸೆಂಟ್ ಅವರ ನೇತೃತ್ವದಲ್ಲಿ ಭಾರದತ ಎಲ್ಲಾ ಸ್ಕೌಟ್ ಸಂಸ್ಥೆಯನ್ನು ಒಗ್ಗೂಡಿಸುವ ಪ್ರಥಮ ಪ್ರಯತ್ನ ನೆಡೆಯಿತು.

೧೯೨೭ - ಮೈಸೂರು ರಾಜ್ಯದಲ್ಲಿ ''ದಿ ಗರ್ಲ್ ಗೈಡ್ ಆಫ್ ಮೈಸೂರು'' ಎಂಬ ಸಂಸ್ಥೆಯು ಪ್ರಾರಂಭವಾಯಿತು. ಇದಕ್ಕೆ ಯುವರಾಣಿಯವರೇ ಮುಖ್ಯ ಗೈಡ್ ಆಗಿದ್ದರು. ಶ್ರೀ ಜಯಚಾಮರಾಜ ಒಡೆಯರ್‌ರವರು ಮುಖ್ಯ ಕಬ್ ಆಗಿದ್ದರು.

೧೯೩೭ - ದೆಹಲಿಯಲ್ಲಿ ''ಆಲ್ ಇಂಡಿಯಾ ಬಾಯ್ ಸ್ಕೌಟ್ ಜಾಂಬೋರಿ'' ನಡೆಯಿತು. ಇದಕ್ಕೆ ಬೇಡನ್ ಪೊವೆಲ್ ಅವರು ಆಹ್ವಾನಿತರಾಗಿ ಆಗಮಿಸಿದ್ದರು.

೧೯೫೦ - (೭-೧೧-೧೯೫೦) ರಲ್ಲಿ ''ಭಾರತ್ ಸ್ಕೌಟ್ ಮತ್ತು ಗೈಡ್ಸ್'' ಸಂಸ್ಥೆ ಅಸ್ಥಿತ್ವಕ್ಕೆ ಬಂದಿತು.

೧೯೫೧-(೧೫-೮-೧೯೫೧) - ರಲ್ಲಿ ಅಲ್ಲಿಯವರೆಗೆ ಪ್ರತ್ಯೇಕವಾಗಿದ್ದ ''ಆಲ್ ಇಂಡಿಯಾ ಗರ್ಲ್ ಅಸೋಸಿಯೇಷನ್'' ಸಹ ''ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್'' ಸಂಸ್ಥೆಯೊಂದಿಗೆ ವಿಲಿನವಾಯಿತು.



ರಾಷ್ಟ್ರ ಸೇವೆಯ ಆದರ್ಶವನ್ನು ಹರಡಲು ಸ್ಕೌಟ್ ಮತ್ತು ಗೈಡ್ ಚಳವಳಿ ಮಹತ್ವದ ಪಾತ್ರ ವಹಿಸಿದೆ.

- ಇಂದಿರಾ ಗಾಂಧಿ

# ಸ್ಕೌಟಿಂಗ್ ಕಥೆಗಳು

ಎಂ. ಎನ್. ಷಡಾಕ್ಷರಿ.

**ಬೈಬಲ್** ಬಿಟ್ಟರೆ ಜಗತ್ತಿನಲ್ಲಿ ಅತಿ ಹೆಚ್ಚು ಮುದ್ರಿಸಲಾಗಿರುವ ಪುಸ್ತಕವೆಂದರೆ ''ಸ್ಕೌಟಿಂಗ್ ಫಾರ್ ಬಾಯ್ಸ್'' ಜಗತ್ತಿನ ಕೋಟ್ಯಂತರ ಜನರ ಅದರಲ್ಲೂ ಮುಖ್ಯವಾಗಿ ಬಾಲಕರ ಮನ ಸೆಳೆದಿರುವ ಈ ಪುಸ್ತಕದಲ್ಲೇನಿದೆ ?

೧೯೦೭ನೆಯ ಇಸವಿಯಲ್ಲಿ ಕೇವಲ ೨೦ ಮಕ್ಕಳೊಂದಿಗೆ ಒಂದು ಪ್ರಾಯೋಗಿಕ ಶಿಬಿರದಿಂದ ಪ್ರಾರಂಭವಾದ ಈ ಸ್ಕೌಟ್ ಆಳವಳಿ ಇಂದು ೩೦ ಮಿಲಿಯನ್‌ಗೂ ಮೀರಿ ಸದಸ್ಯರುಗಳನ್ನೊಳಗೊಂಡಿದೆ. ೧೯೦೮ರಲ್ಲಿ ಬೇಡನ್ ಪೊವೆಲ್‌ಅವರು ತಮ್ಮ ಅಪಾರ ಅನುಭವ, ಜ್ಞಾನ ಮತ್ತು ಸಾಮಾಜಿಕ ಕಳಕಳಿಯನ್ನು ಬರವಣಿಗೆಗೆ ಇಳಿಸಿ ''ಸ್ಕೌಟಿಂಗ್ ಫಾರ್ ಬಾಯ್ಸ್'' ಪುಸ್ತಕವನ್ನು ೬ ಪಾಕ್ಷಿಕ ಹೊತ್ತಗೆಗಳಾಗಿ ಹೊರತಂದರು ಈ ಹೊತ್ತಗೆಗಳನ್ನು ಓದಿ ಅದರಿಂದ ಪ್ರೇರಿಪಿತರಾದ ಬಾಲಕರು ಸ್ವಪ್ರೇರಣೆಯಿಂದ ಸ್ಕೌಟ್ ದಳಗಳನ್ನು ಪ್ರಾರಂಭಿಸಿದರು.

ಹಾಗಾದರೆ ಈ ಪುಸ್ತಕದಲ್ಲಿ ಅಂತಹದ್ದೇನಿದೆ? ಬೇಡನ್ ಪೊವೆಲ್‌ಅವರ ಪ್ರಕಾರ ಆಧುನಿಕ ನಾಗರಿಕತೆಯ ಮಧ್ಯೆ ಬೆಳೆದವರಿಗೆ ತಮ್ಮನ್ನು ತಾವು ನೋಡಿಕೊಳ್ಳಲು ಕೂಡ ಬರುವುದಿಲ್ಲ. ಅತೀ ಸಣ್ಣ ವಿಷಯಗಳಾದ ಬೆಂಕಿ ಮಾಡುವುದು, ಅಡಿಗೆ ಮಾಡುಕೊಳ್ಳುವುದು, ಮರಳು ಗಾಡಿನಲ್ಲಿ ನೀರು ಹುಡುಕುವುದು, ತಾವು ಶ್ರಮಿಸಿದ ದಾರಿಯನ್ನು ಜ್ಞಾಪಕವಿಟ್ಟು ಕೊಳ್ಳುವುದು, ಗಡಿಯಾರವಿಲ್ಲದೆ ಸಮಯ ತಿಳಿಯುವುದು, ಪಾದರಕ್ಷೆಗಳನ್ನು ದುರಸ್ತಿ ಮಾಡಿಕೊಳ್ಳುವುದು ಮುಂತಾದ ಸಮಸ್ಯೆಗಳನ್ನು ಸಂತೋಷದಿಂದ ಸ್ವೀಕರಿಸಿ ಪರಿಹಾರ ಕಂಡುಕೊಳ್ಳುವುದೇ ಉತ್ತಮ ಸ್ಕೌಟ್‌ನ ಮತ್ತು ಉತ್ತಮ ನಾಗರಿಕನ ಮುಖ್ಯ ಗುಣಗಳು. ಪ್ರತಿಕೂಲಗಳ ಮಧ್ಯೆಯೂ ನಗುವವನೇ ಉತ್ತಮ ವ್ಯಕ್ತಿ.

***ಬೇಡನ್ ಪೊವೆಲ್ ಅವರ 'ಸ್ಕೌಟಿಂಗ್ ಫಾರ್ ಬಾಯ್ಸ್' ಮತ್ತಿತರ ಗ್ರಂಥಗಳಿಂದ ಆಯ್ದ ಲೇಖನಗಳು ಇಲ್ಲಿವೆ.***

### ೧ ಕಿಮ್‌ನ ಸಾಹಸಗಳು :

ಒಬ್ಬ ಸ್ಕೌಟ್ ಬಾಲಕ ಏನು ಮಾಡಬಲ್ಲ? ಎನ್ನುವುದಕ್ಕೆ ಒಳ್ಳೆಯ ಉದಾಹರಣೆ ರುಡ್‌ಯಾರ್ಡ್ ಕಿಪ್ಲಿಂಗ್‌ನ ಕಥೆಗಳಲ್ಲಿನ ಕಿಮ್ ಎನ್ನುವ ಬಾಲಕ.

ಕಿಮ್‌ನ ಪೂರ್ಣ ಹೆಸರು ಕಿಮ್‌ಬಾಲ್ ಓ ಹಾರ. ಇವನು ಭಾರತದಲ್ಲಿ ಸೇವೆ ಸಲ್ಲಿಸುತ್ತಿದ್ದ ಒಬ್ಬ ಐರಿಷ್ ಯೋಧನ ಮಗ. ಕಿರಿಯ ವಯಸ್ಸಿನಲ್ಲಿಯೇ ತಂದೆ-ತಾಯಿ ಇಬ್ಬರೂ ತೀರಿಕೊಂಡಿದ್ದರಿಂದ ಅವನಿಗೆ ಚಿಕ್ಕಮ್ಮನ ಆಶ್ರಯವೇ ಗತಿಯಾಯಿತು. ಅವನ ಜತೆಗಾರರೆಲ್ಲಾ ಸ್ಥಳೀಯ ಬಾಲಕರಾದ್ದರಿಂದ ಅವನು ಅವರ ಭಾಷೆ ಮತ್ತು ರೀತಿ ರಿವಾಜುಗಳನ್ನು ಚೆನ್ನಾಗಿ ಕಲಿತ. ಅಲೆಮಾರಿ ಸಾಧುವೊಬ್ಬನ ಜತೆಯಲ್ಲಿ ಉತ್ತರ ಭಾರತವನ್ನೆಲ್ಲಾ ಸುತ್ತುವಾಗ ತನ್ನ ತಂದೆಯ ಹಳೆಯ ಸೈನ್ಯ ತುಕಡಿಗೆ ಸಿಕ್ಕಲು ಅವರು ಅವನನ್ನು ಕಳ್ಳನೆಂದು ದಸ್ತಗಿರಿ ಮಾಡಿದರು. ಅವನಲ್ಲಿದ್ದ ಜನನ ಪ್ರಮಾಣಪತ್ರ ಮತ್ತಿತರೆ ಪುರಾವೆಗಳನ್ನು ನೋಡಿ ತಮ್ಮವನೇ ಎಂದು ಅರಿತು ಅವನನ್ನು ಅವರ ಜತೆಯಲ್ಲೇ ಇಟ್ಟುಕೊಂಡು ಅವನಿಗೆ ವಿದ್ಯಾಭ್ಯಾಸ ಕೊಡಲು ಪ್ರಾರಂಭಿಸಿದರು. ಆದರೆ ರಜೆ ಸಿಕ್ಕಿದಾಗಲೆಲ್ಲಾ ಕಿಮ್‌ನು ಭಾರತೀಯನಂತೆ ವಸ್ತ್ರ ಧರಿಸಿ ನಿರಾಳವಾಗಿ ಓಡಾಡುತ್ತಿದ್ದ.

ಸ್ವಲ್ಪ ಸಮಯದ ನಂತರ ಇವನಿಗೆ ಹಳೆಯ ಒಡವೆ ಮತ್ತು ವಸ್ತುಗಳ ಮಾರಾಟಗಾರ ಲಾರ್ಗನ್ ಎನ್ನುವನ ಪರಿಚಯವಾಗುತ್ತದೆ. ಅವನು ಒಬ್ಬ ಸರ್ಕಾರಿ ಬೇಹುಗಾರಿಕೆ

ಅಧಿಕಾರಿ ಕೂಡ.

ಸ್ಥಳೀಯ ಜೀವನ ಮತ್ತು ರೀತಿ ರಿವಾಜುಗಳ ಬಗ್ಗೆ ಕಿಮ್‌ಗೆ ಇದ್ದ ವಿಶೇಷ ಜ್ಞಾನವನ್ನು ಬೇಹುಗಾರಿಕೆಗೆ ಉಪಯೋಗಿಸಬಹುದೆಂದು ಈ ಅಧಿಕಾರಿಯು ಚಿಕ್ಕ ಚಿಕ್ಕ ವಿಷಯಗಳನ್ನು ನೋಡಿ ಹೇಗೆ ಜ್ಞಾಪಕವಿಟ್ಟುಕೊಳ್ಳುವು ಎನ್ನುವುದರ ಬಗ್ಗೆ ಕಿಮ್‌ಗೆ ತರಬೇತಿ ನೀಡಲು ಲಾರ್ಗನ್ ಪ್ರಾರಂಭಿಸಿದ.

ಒಂದು ಹರಿವಾಣದಲ್ಲಿ ಕೆಲವು ಅಮೂಲ್ಯ ರತ್ನಗಳನ್ನಿಟ್ಟು ಅವನ್ನು ಸ್ವಲ್ಪ ಸಮಯದ ನಂತರ ಜ್ಞಾಪಿಸಿಕೊಂಡು ಹೇಳುವುದು, ಮೊದಮೊದಲು ಕಾಲವನ್ನೇ ಜ್ಞಾಪಿಸಿಕೊಂಡು ಹೇಳುತ್ತಿದ್ದ ಕಿಮ್ ನಿರಂತರ ಅಭ್ಯಾಸದ ನಂತರ ಎಲ್ಲವನ್ನು ಕರಾರುವಕ್ಕಾಗಿ ಹೇಳಲು ಪ್ರಾರಂಭಿಸಿದನು. ಅಷ್ಟೇ ಅಲ್ಲದೆ ಒಂದೇ ಬಾರಿ ನೋಡಿದರೆ ಸಾಕು, ವಿವರವಾಗಿ ವಸ್ತುಗಳನ್ನು ಜ್ಞಾಪಕವಿಟ್ಟುಕೊಳ್ಳುವ ಸಾಮರ್ಥ್ಯ ಪಡೆದುಕೊಂಡನು. ನಂತರ ಅವನನ್ನು ಗುಪ್ತ ದಳಕ್ಕೆ ಸೇರಿಸಿಕೊಂಡು ಕತ್ತಿನಲ್ಲಿ ಹಾಕಿಕೊಳ್ಳಲು ಒಂದು ಪದಕವನ್ನು ಕೊಡಲಾಯಿತು.

ಈ ರೀತಿ ಗುಪ್ತ ದಳದ ಸದಸ್ಯನಾದ ಕಿಮ್‌ನು ಒಂದು ಬಾರಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ತಲೆಗೆ ಗಾಯಗಳಾಗಿದ್ದ ಒಬ್ಬ ಭಾರತೀಯನನ್ನು ಸಂಧಿಸಿದ. ತನ್ನ ಆ ಗಾಯಗಳು ಗಾಡಿಯಿಂದ ಬಿದ್ದು ಆಗಿವೆ ಎಂದು ಆತ ಹೇಳಿಕೊಂಡ. ಆದರೆ ಸೂಕ್ಷ್ಮ ದೃಷ್ಟಿಯ ಕಿಮ್‌ಗೆ ಅವು ಚೂಪಾದ ಆಯುಧಗಳಿಂದ ಆದ ಗಾಯಗಳೆಂದು ತಿಳಿಯಿತು.

ಆ ವ್ಯಕ್ತಿಯು ತಲೆಗೆ ಪಟ್ಟಿ ಕಟ್ಟಿಕೊಳ್ಳುತ್ತಿದ್ದಾಗ ಕತ್ತಿನಲ್ಲಿದ್ದ ಪದಕವನ್ನು ನೋಡಿ ಅವನೂ ಕೂಡ ತನ್ನಂತೆಯೇ ದಳಕ್ಕೆ ಸೇರಿದವನೆಂದು ಕಿಮ್‌ಗೆ ತಿಳಿಯಿತು. ಅವನು ತನ್ನನ್ನು ಶತ್ರುಗಳು ಹಿಂಬಾಲಿಸಿ ಗಾಯಗೊಳಿಸಿ ಈ ರೈಲಿನಲ್ಲಿಯೂ ತನಗಾಗಿ ಹುಡುಕುತ್ತಿದ್ದಾರೆ ಎಂದು ಕಿಮ್‌ಗೆ ತಿಳಿಸಿದ.

ಕೂಡಲೇ ಕಿಮ್‌ಗೆ ಒಂದು ಉಪಾಯ ಹೊಳೆದು ಕಾರ್ಯಪ್ರವೃತ್ತನಾದ. ಅವನ ಕೂದಲನ್ನೆಲ್ಲಾ ಕೆದರಿ, ಮೈಗೆಲ್ಲಾ ಬೂದಿ ಬಳಿದು ಒಬ್ಬ ಬಿಕ್ಷೆ ಬೇಡುವ ಸಂನ್ಯಾಸಿಯ ಹಾಗೆ ರೂಪ ಬದಲಾಯಿಸಿದ. ಸ್ವತಃ ಅವನ ತಾಯಿಯೇ ಅವನನ್ನು ನೋಡಿದರೂ ಗುರುತು ಹಿಡಿಯಲಾರದಷ್ಟು ಅವನ ವೇಷ ಬದಲಾಗಿತ್ತು. ಹೀಗಾಗಿ ಅವನು ಶತ್ರುಗಳಿಂದ ತಪ್ಪಿಸಿಕೊಂಡು ತನ್ನ ಕಾರ್ಯವನ್ನು ಪೂರ್ಣಗೊಳಿಸಲು ಆ ಗುಪ್ತಚರನಿಗೆ ಸಾಧ್ಯವಾಯಿತು.

ಈ ರೀತಿ ವೇಷ ಮರೆಸಿಕೊಳ್ಳುವ ಕಲೆಯು ಒಬ್ಬ ಒಳ್ಳೆಯ ಸ್ಕೌಟ್‌ಗೆ ಒಂದು ವರವೇ ಸರಿ.

### ೨. ಪ್ರಾಣ ಉಳಿಸುವ ಗಂಟುಗಳು :

ಕೆನಡಾದ ನಯಾಗರ ಜಲಪಾತದ ನದಿಯ ಕೆಳಭಾಗ, ಚಳಿಗಾಲದಿಂದಾಗಿ ನೀರು ಹೆಪ್ಪುಗಟ್ಟಿದೆ. ಆ ಹೆಪ್ಪಿನಿಂದ ಆಗಿರುವ ಸೇತುವೆಯ ಮೇಲೆ ಮೂರು ಜನ ಅಂದರೆ ಗಂಡ, ಹೆಂಡತಿ ಮತ್ತು ೧೭ವರ್ಷದ ಮಗ ದಾಟುತ್ತಿದ್ದಾರೆ. ಅವರು ಮಧ್ಯೆ ಬಂದಾಗ ಆ ಮಂಜುಗಡ್ಡೆಯ ಸೇತುವೆ ಬಿರುಕು ಬಿಟ್ಟು ಕುಸಿಯಿತು. ಕೈಗೆಸಿಕ್ಕಿದ ಹಿಮಗಡ್ಡೆಯ ತುಂಡುಗಳಿಗೆ ಅಡರಿಕೊಂಡು ಗಂಡ ಹೆಂಡತಿ ಒಂದು ಕಡೆ ಮತ್ತು ಮಗ ಮತ್ತೊಂದು ಕಡೆ ತೇಲಲು ಪ್ರಾರಂಭ ಮಾಡಿದರು. ನದಿಯಲ್ಲಿ ತೇಲುತ್ತಿದ್ದ ಇದೇ ರೀತಿಯ ಹಿಮದ ಗಡ್ಡೆಗಳಿಗೆ ಡಿಕ್ಕಿ ಹೊಡೆಯುತ್ತಾ ನಿಧಾನವಾಗಿ ಒಂದು ಮೈಲು ದೂರವಿರುವ ಪ್ರಪಾತದ ಕಡೆಗೆ ಸಾಗಿತ್ತು.

ಇವರ ಚಿಂತಾಜನಕ ಸ್ಥಿತಿಯನ್ನರಿತ ದಡದಲ್ಲಿದ್ದವರು ನಿಸ್ಸಾಹಯಕವಾಗಿ ನೋಡುತ್ತಿದ್ದರು. ಏಕೆಂದರೆ ಈಜುವುದು ಮತ್ತು ದೋಣಿಯಲ್ಲಿ ಹೋಗಿ ಕಾಪಾಡುವುದು ಇವೆರಡೂ ಅಸಾಧ್ಯವಾಗಿತ್ತು. ನಿಧಾನವಾಗಿ ಚಲಿಸುತ್ತಿದ್ದ ಮೂವರು ಪ್ರಪಾತದಿಂದ ಸ್ವಲ್ಪವೇ ದೂರದಲ್ಲಿ ಒಂದು ಸೇತುವೆ ಕೆಳಗಡೆ ಬಂದರು.

ಸೇತುವೆ ಮೇಲೆ ನೆರೆದ ಜನರು ೧೬೦ ಅಡಿ ಎತ್ತರದಿಂದ ಅವರನ್ನು ರಕ್ಷಿಸಲು ಹಗ್ಗಗಳನ್ನು ಅವರಿಗೆ ಸಿಕ್ಕುವ ಹಾಗೆ ಇಳಿಬಿಟ್ಟರು.

ಹುಡುಗನ ಕೈಗೆ ಒಂದು ಹಗ್ಗವು ಸಿಕ್ಕಿತು. ನಿಧಾನವಾಗಿ ಜನಗಳು ಅವನನ್ನು ಮೇಲಕ್ಕೆಳೆಯಲು ಪ್ರಾರಂಭಿಸಿದರು ಅರ್ಧಕ್ಕೆ ಬಂದಿದ್ದಾಗ ಅವನ ಕೈಗಳು ಸೋತು ನೀರಿಗೆ ಬಿದ್ದು ಮತ್ತೆ ಕಾಣಲೇಇಲ್ಲ.

ಇತ್ತ ಗಂಡನು ಕೂಡ ಒಂದು ಹಗ್ಗವನ್ನು ಹಿಡಿದು ತನ್ನ ಹೆಂಡತಿಯನ್ನು ಉಳಿಸುವುದಕ್ಕಾಗಿ ಅವಳ ಸುತ್ತ ಹಗ್ಗವನ್ನು ಕಟ್ಟಲು ಪ್ರಯತ್ನಿಸಿದರೂ ಸಾಧ್ಯವಾಗದೆ ಪ್ರಪಾತದೆಡೆಗೆ ಎಳೆಯಲ್ಪಟ್ಟು ಮಾಯವಾದಳು.

ಜೀವ ಉಳಿಸುವ ಗಂಟಾದ ಬೋಲೈನ್ ಗೊತ್ತಿದ್ದರೆ ಅವರುಗಳು ಬದುಕಬಹುದಿತ್ತಲ್ಲವೆ?

### ೩. ಎಡಗೈ ಹಸ್ತಲಾಘವ :

ಬೇಡನ್ ಪೊವೆಲ್‌ಅವರು ನಾಯಕರಾಗಿದ್ದ ಬ್ರಿಟಿಷ್ ಪಡೆಗೂ ಮತ್ತು ಸ್ಥಳೀಯ ಅಶಾಂತಿ ಬುಡಕಟ್ಟು ಜನರಿಗೂ

ಬಹಳ ದಿನಗಳಿಂದ ಕಾದಾಟಗಳು ನಡೆಯುತ್ತಲೇ ಇದ್ದವು.

ಬೇಡನ್ ಪೊವೆಲ್ ಮತ್ತು ಅಶಾಂತಿ ತಂಡದ ನಾಯಕ ಪ್ರೆಮ್‌ಫಾಮತ್ ಪರಸ್ಪರ ಭೇಟಿಯಾಗಿದ್ದರೂ ಉತ್ತಮ ಯೋಧರಾದ ಇಬ್ಬರಿಗೂ ಒಬ್ಬರ ಬಗ್ಗೆ ಮತ್ತೊಬ್ಬರಿಗೆ ಅಪಾರ ಗೌರವವಿತ್ತು. ಕಡೆಗೊಂದು ದಿನ ಅಶಾಂತಿ ಜನಾಂಗದ ನಾಯಕ ಪ್ರೆಮ್‌ಫಾನನನ್ನು ಸೆರೆಹಿಡಿಯಲಾಯಿತು.

ಅವನನ್ನು ಬೇಡನ್ ಪೊವೆಲ್‌ಅವರ ಎದುರು ಕರೆದು ತಂದಾಗ ಆತ ತನ್ನ ಎಡಗೈಯನ್ನು ಮುಂದೆ ಚಾಚಿದನು. ಬೇಡನ್ ಪೊವೆಲ್ ಅವರು ಬಲಗೈಯನ್ನು ಮುಂದೂಡಿದ್ದರು. ಆಗ ಪ್ರೆಮ್ ಫಾ ಹೇಳಿದ ''ನನ್ನ ದೇಶದಲ್ಲಿ ಪರಾಕ್ರಮಿಗಳಲ್ಲಿ ಪರಾಕ್ರಮಿಗಳು ಮಾತ್ರ ಎಡಗೈನಲ್ಲಿ ಹಸ್ತಲಾಘವ ಮಾಡುತ್ತಾರೆ.'' ಎಂದು. ಈ ಘಟನೆಯಿಂದ ಸ್ಕೌಟ್ ಮತ್ತು ಗೈಡ್ ಚಳವಳಿಯಲ್ಲಿ ಬೇಡನ್ ಪೊವೆಲ್ ಅವರು ಎಡಗೈ ಹಸ್ತಲಾಘವವನ್ನು ಜಾರಿಗೆ ತಂದರು.

''ಎಡಗೈ ಸ್ನೇಹ ಹಸ್ತ''ಎಂದೆನಿಸ್ಕಿಕೊಳ್ಳುತ್ತದೆ. ಪ್ರಪಂಚದಾದ್ಯಂತ ಸ್ಕೌಟ್‌ಗಳು ಒಬ್ಬರನ್ನೊಬ್ಬರು ಸಂಧಿಸಿದಾಗ ಎಡಗೈನಲ್ಲಿ ಹಸ್ತಲಾಘವ ಮಾಡುತ್ತಾರೆ. ಇದು ನಾವೆಲ್ಲಾ ಒಂದೇ ಸಂಸ್ಥೆಯ ಸದಸ್ಯರು ಮತ್ತು ಒಂದೇ ಧ್ಯೇಯೋದ್ದೇಶಗಳನ್ನು ಪಾಲಿಸುತ್ತೇವೆ ಎನ್ನುವುದರ ದ್ಯೋತಕವಾಗಿದೆ.

### ೪. ಮರದ ಮಣಿಗಳು

ಸ್ಕೌಟಿಂಗ್‌ನಲ್ಲಿ ಹಿಮಾಲಯ ವುಡ್‌ಬ್ಯಾಡ್ಜ್ ಪಡೆದವರಿಗೆ ಮರದ ಮಣಿಗಳನ್ನು ನೀಡುವ ಪದ್ಧತಿ ಇದೆ. ಇದು ನಮಗೆ ಪದಕವಿದ್ದಂತೆ. ಈ ಮರದ ಮಣಿಯ ಉಪಯೋಗ ಹೇಗೆ ಬಂದಿತು? ಎನ್ನುವುದಕ್ಕೆ ಹಿನ್ನೆಲೆ ಹೀಗಿದೆ.

ದಕ್ಷಿಣ ಆಫ್ರಿಕಾದಲ್ಲಿ ಬ್ರಿಟಿಷ್ ಸೈನ್ಯಕ್ಕೆ ಆಗಾಗ ಕಿರುಕುಳ ಕೊಡುತ್ತಿದ್ದ ಬುಡಕಟ್ಟು ಜನರ ಒಂದು ಗುಂಪಿನ ನಾಯಕ ಡೇನಿಜೂಲು ೧೮೮೮ರಲ್ಲಿ ಈ ಗುಂಪಿನ ಮೇಲೆ ಕಾರ್ಯಾಚರಣೆಯಲ್ಲಿ ಬೇಡನ್‌ಪೊವೆಲ್ ಸೈನ್ಯ ಕಾರ್ಯದರ್ಶಿಯಾಗಿದ್ದರು.

ಡೇನಿ ಜೂಲು ಕೆಲವು ಸಂಘರ್ಷಗಳ ನಂತರ ಸೇಜಾ ಬುಷ್ ಎನ್ನುವ ಗುಡ್ಡಗಾಡು ಪ್ರದೇಶದಲ್ಲಿ ಆಶ್ರಯ ಪಡೆದಿದ್ದನು ಮೂರು ಕಡೆಯಿಂದಲೂ ಬ್ರಿಟಿಷ್ ಸೈನ್ಯವು ಸುತ್ತುವರೆಯಿತು. ಮಾರನೆಯ ದಿನ ಬೆಳಿಗ್ಗೆ ಬೇಡನ್ ಪೊವೆಲ್ ಅವರು ಕೆಲವು ಬೇಹುಗಾರರೊಂದಿಗೆ ಪರಿಸ್ಥಿತಿಯನ್ನು ಅರಿಯಲು ಜಾಗರೂಕತೆಯಿಂದ ಅವರು ಬೀಡು ಬಿಟ್ಟಿದ್ದ ಸ್ಥಳವನ್ನು ತಲುಪಿದರು. ಆದರೆ ಆಗ ತಾನೆ ಅವಸರ ಅವಸರವಾಗಿ ಡೇನಿಜೂಲು ಮತ್ತವನ ಸಂಗಡಿಗರು ತಂಗುದಾಣವನ್ನು ಖಾಲಿಮಾಡಿ ತಪ್ಪಿಸಿಕೊಂಡಿದ್ದರು. ಡೇನಿಜೂಲು ವಾಸಿಸುತ್ತಿದ್ದ ಗುಡಿಸಲಿನಲ್ಲಿ ಅವನ ಇತರ ವಸ್ತುಗಳೊಂದಿಗೆ ಒಂದು ಉದ್ದವಾದ ಮರದ ಮಣಿಯ ಹಾರ ದೊರೆಯಿತು. ಬೇಡನ್ ಪೊವೆಲ್ ತಮ್ಮೊಂದಿಗೆ ಗೌರವದಿಂದ ಮತ್ತು ಸುರಕ್ಷಿ ತಾವಾಗಿಸಿಕೊಂಡಿದ್ದ ಆ ಮಣಿಯ ಹಾರದಿಂದ ಎರಡೆರಡು ಮಣಿಗಳನ್ನು ತೆಗೆದು ಪ್ರಪ್ರಥಮ ಸ್ಕೌಟ್ ಶಿಕ್ಷಕರ ಉನ್ನತ ತರಬೇತಿ ಪಡೆದವರಿಗೆ ನೀಡಿದರು. ಹೀಗಾಗಿ ಈ ತರಬೇತಿಗೆ (ವುಡ್ ಬ್ಯಾಡ್ಜ್) ಅಥವಾ ಮರದಮಣಿ ಪದವಿಯೆಂದು ಹೆಸರು ಬಂದಿತು.

### ೫. ಕೂಡೂ ಕಹಳೆ

ಕೂಡೂಕಹಳೆಗೆ ಕೂಡ ಸ್ಕೌಟ್‌ಂಗಿನಲ್ಲಿ ಮರದ ಮಣಿಯಷ್ಟೇ ಮಹತ್ವವಿದೆ. ಕೂಡೂ ಎಂದರೆ ದಕ್ಷಿಣ ಅಫ್ರಿಕಾದ ಮತ್ತು ಅಭಿಸೀನ್ಯ ಪ್ರಾಂತದಲ್ಲಿ ವಾಸಿಸುವ ಜಿಂಕೆಯ ಜಾತಿಯ ಒಂದು ಮೃಗ. ಒಂದು ಗಂಡು ಕೂಡೂ ಸುಮಾರು ೫ ಅಡಿ ಎತ್ತರ ಸಾಧಾರಣ ನೀಲಿ ಬಣ್ಣ ಮತ್ತು ಬೆನ್ನಿನ ಮೇಲೆ ಉದ್ದವಾಗಿ ಒಂದು ಬಿಳಿಯ ಗೆರೆ. ಆ ಬಿಳಿಯ ಗೆರೆಯಿಂದ ದೇಹದುದ್ದಕ್ಕೂ ಪಕ್ಕಕ್ಕೆ ಇಳಿದಿರುವ ಬಿಳಿಗೆರೆಗಳು. ಈ ಪ್ರಾಣಿಯ ಅತಿ ಸುಂದರವಾದ ಅಂಗವೆಂದರೆ ಸುರುಳಿ ಸುತ್ತಿಕೊಂಡಿರುವ ಅದರ ಕೋಡುಗಳು. ಅತೀ ಸೂಕ್ಷ್ಮಮತಿಯು ಮತ್ತು ಚುರುಕಾದ ಈ ಪ್ರಾಣಿಯನ್ನು ಹಿಡಿಯುವುದು ಬಹಳ ಕಠಿಣಕರವಾದ ಕಾರ್ಯ.

೧೮೯೬ರಲ್ಲಿ ಮೆಟಾಬೆಲೆ ಪ್ರಾಂತದಲ್ಲಿ ಸೈನ್ಯ ಕಾರ್ಯಾಚರಣೆಯ ನಾಯಕರಾಗಿದ್ದ ಬೇಡನ್‌ಪೊವೆಲ್‌ಗೆ ಆ ಪ್ರಾಂತದ ಜನರು ಹೇಗೆ ಸುದ್ದಿಯನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಅತಿ ಕಡಿಮೆ ಸಮಯದಲ್ಲಿ ಮುಟ್ಟಿಸುತ್ತಾರೆ? ಎನ್ನುವುದರ ಬಗ್ಗೆ ಆಶ್ಚರ್ಯ ಅವರನ್ನು ಕಾಡುತ್ತಿತ್ತು. ನಂತರದ ದಿನಗಳಲ್ಲಿ ಅವರಿಗೆ ಹೊಳೆಯಿತು. ಕೂಡೂ ಕಹಳೆಯ ಮೂಲಕ ಮೈಲು ಗಟ್ಟಲೆ ಸರದಿಯಲ್ಲಿ ಸಂದೇಶಗಳನ್ನು ರವಾನಿಸುತ್ತಾರೆ ಎಂದು.

ಬಹಳ ಸಾಹಸಪಟ್ಟು ಮೆಟಾಬೆಲೆಯ ತಂಡದ ನಾಯಕನನ್ನು ಬೇಡನ್‌ಪೊವೆಲ್‌ರ ಸೈನ್ಯವು ಹಿಡಿಯಿತು. ಅವನ ಹತ್ತಿರ ಒಂದು ವಿಚಿತ್ರವಾದ ದಂಡ ಮತ್ತು ಕೂಡೂಕಹಳೆ ಎರಡೂ ಇದ್ದವು.

ನಂತರ ಅವನು ತಪ್ಪಿಸಿಕೊಂಡರೂ. ಈ ಎರಡೂ ವಸ್ತುಗಳು ಮಾತ್ರ ಬೇಡನ್‌ಪೊವೆಲ್ ಅವರ ಹತ್ತಿರ ಉಳಿದುಕೊಂಡವು.

ಮಟಾಬೆಲೆ ಯುದ್ಧಕಹಳೆ ಕೂಡೂಕಹಳೆಯನ್ನು ಬೆಳಿಗ್ಗೆ ಶಿಬಿರಾರ್ಥಿಗಳನ್ನು ಎಚ್ಚರಗೊಳಿಸಲು ಬ್ರೌನ್‌ಸೀ ದ್ವೀಪದಲ್ಲಿ ನಡೆದ ತಮ್ಮ ಪ್ರಥಮ ಸ್ಕೌಟ್ ಶಿಬಿರದಲ್ಲಿ ಉಪಯೋಗಿಸಿದರು.

### ೬. ಚರ್ಮದ ದಾರ :

ಮರದಮಣಿ ಕೂಡೂಕಹಳೆಯಷ್ಟೇ ಮಹತ್ವವಾದ ಮತ್ತೊಂದು ವಸ್ತುವೆಂದರೆ ಚರ್ಮದ ದಾರ ಅಥವಾ ಬೂಟು ಕಟ್ಟುವ ಹುರಿ. ವುಡ್‌ಬ್ಯಾಡ್ಜ್ ತರಬೇತಿ ಪಡೆದ ಸ್ಕೌಟ್ ಶಿಕ್ಷಕರಿಗೆ ಈ ತೊಗಲು ದಾರಕ್ಕೆ ಪೋಣಿಸಿದ ಎರಡು ಮರದ ಮಣಿಗಳನ್ನು ನೀಡಲಾಗುತ್ತದೆ. ಭಾರತದಲ್ಲಿ ಈ ತೊಗಲಿನ ಹುರಿಯ ಬದಲು (ಧಾರ್ಮಿಕ ಕಾರಣಗಳಿಗಾಗಿ) ನಾರಿನ ಹುರಿಯು ಉಪಯೋಗದಲ್ಲಿದೆ. ಮೆಫೆ ಕಿಂಗ್ ಪ್ರಾಂತದ ರಕ್ಷಣೆಯೊಂದಿಗೆ ಈ ತೊಗಲಿನ ಹುರಿಯ ಕಥೆಯು ಹೆಣೆದಿದೆ.

೨೧೭ ದಿನ ನಡೆದ ಈ ದಿಗ್ಬಂಧನದ ಅಂತಿಮ ದಿನಗಳಲ್ಲಿ ಒಂದು ದಿನ ಬೇಡನ್‌ಪೊವೆಲ್ ತಮ್ಮ ಮುಂಜಾನೆಯ ಗಸ್ತುಮುಗಿಸಿ ಹಿಂತಿರುಗುತ್ತಿದ್ದರು. ಅವರ ದಂಡಿನಲ್ಲಿ ಸಹಾಯಕರಾಗಿ ಕೆಲಸ ಮಾಡುತ್ತಿದ್ದ ಒಬ್ಬ ಕರಿಯ ಬಾಲಕ ಬೇಡನ್‌ಪೊವೆಲ್‌ರನ್ನು ಕೇಳಿದ. ಏಕೆ ನೀವು ದಿನನಿತ್ಯದಂತೆ ಶಿಲ್ಲಿ ಹಾಕುತ್ತಿಲ್ಲ? ಎಂದು, ಬೇಡನ್‌ಪೊವೆಲ್ ಅವರು ಏಕೋ ಬೇಜಾರಾಗಿದೆ ಎಂದು ಉತ್ತರಿಸಿದರು. ಕೂಡಲೇ ಆ ಮುಗ್ಧ ಬಾಲಕನು ಕುತ್ತಿಗೆಗೆ ಹಾಕಿಕೊಂಡಿದ್ದ ತೊಗಲಿನ ಹುರಿಯನ್ನು ತೆಗೆದು ಬಿ. ಪಿ. ಗೆ ಕೊಟ್ಟು ಹೇಳಿದ ''ನನ್ನ ತಾಯಿಯು ಈ ಹುರಿಯನ್ನು ಅದೃಷ್ಟ ತರುತ್ತದೆಂದು ನನ್ನ ಕೊರಳಿಗೆ ಹಾಕಿದಳು. ನೀನು ಹಾಕಿಕೋ. ಅದು ಅದೃಷ್ಟ ತರುತ್ತದೆ'' ಎಂದನು. ಆ ಮುಗ್ಧ ಬಾಲಕನ ಆ ಸೌಜನ್ಯದಿಂದ ಬಿ. ಪಿ. ಗೆ ಹೃದಯ ತುಂಬಿ ಬಂದಿತು. ಕಾಕತಾಳಿಯವೋ ಎನ್ನುವಂತೆ ಮೆಫೆಕಿಂಗ್ ಅನ್ನು ಸ್ವಾತಂತ್ರ್ಯಗೊಳಿಸಲು ಸೈನ್ಯವು ಬರುತ್ತಿರುವ ಸಂತಸದ ಸುದ್ದಿ ಅಂದೇ ತಲುಪಿತು.

### ೭. ಎಲ್ಸ್‌ಡನ್ ಕೊಲೆ :

ಸುಮಾರು ವರ್ಷಗಳ ಹಿಂದೆ ಉತ್ತರ ಇಂಗ್ಲೆಂಡಿನ ಎಲ್ಸ್‌ಡನ್‌ನಲ್ಲಿ ಒಂದು ಭೀಕರಹತ್ಯೆ ನಡೆಯಿತು. ಒಬ್ಬ ಕುರಿ ಕಾಯುವ ಹುಡುಗನ ಚುರುಕು ಬೇಹುಗಾರಿಕಾ ಚಾಣಾಕ್ಷತೆಯಿಂದ ಕೊಲೆಗಾರನನ್ನು ಹಿಡಿದು ಶಿಕ್ಷೆಗೆ ಗುರಿಮಾಡಿ ನೇಣುಹಾಕಲಾಯಿತು.

ಗುಡ್ಡದ ಮೇಲೆ ಕುರಿ ಕಾಯಲು ಹೋಗಿದ್ದ ರಾಬರ್ಟ್ ಹಿಂಡ್ ಮಾರ್ಷ್ ಎನ್ನುವ ಬಾಲಕನು ಕಾಡಿನ ದುರ್ಗಮ ಕಲ್ಲು ಮಣ್ಣಿನ ಹಾದಿಯಲ್ಲಿ ವಾಪಸ್ ಆಗುತ್ತಿದ್ದ ಕಾಲುದಾರಿಯ ಬದಿಯಲ್ಲಿ ಕಾಲು ನೀಡಿಕೊಂಡು ಏನನ್ನೋ ತಿನ್ನುತ್ತಾ ಕುಳಿತಿದ್ದ ಒಬ್ಬ ಅಪರಿಚಿತನನ್ನು ದಾಟಿ ಮುಂದೆ ನಡೆದ.

ಹಾದುಹೋಗುವಾಗ ಆ ಬಾಲಕನು ಅಪರಿಚಿತನನ್ನು ಅವನ ಗಮನ ಸೆಳೆಯದೆ ಚೆನ್ನಾಗಿ ಗಮನಿಸಿದ. ಮುಖ್ಯವಾಗಿ ಅಪರಿಚಿತನ ಬೂಟಿನ ಕೆಳಭಾಗಕ್ಕೆ ಹೊಡೆದಿದ್ದ ವಿಶಿಷ್ಟ ರೀತಿಯ ಮೊಳೆಗಳ ಆಕಾರ ಅವನ ಮನಸ್ಸಿನಲ್ಲಿ ಅಚ್ಚಳಿದೆ ಉಳಿಯಿತು.

ಆ ಬಾಲಕನು ಅದನ್ನೇ ನೋಡುತ್ತಾ ನಿಲ್ಲದೆಯೂ ನೋಡಿಯೂ ನೋಡದವನ ಹಾಗೆ ಎಲ್ಲಾ ವಿವರಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ಹೆಜ್ಜೆ ಹಾಕಿದ. ಅಪರಿಚಿತನು ಈ ಹುಡುಗನು ಯಾರು ಒಬ್ಬ ದಾರಿಹೋಕನೆಂದುಕೊಂಡ.

ಸುಮಾರು ಇಂದಿಪ್ಪತ್ತೈದು ಮೈಲು ದೂರಸಾಗಿ ಊರು ತಲುಪಿದ ಬಾಲಕನು ಒಂದು ಗುಡಿಸಲಿನ ಸುತ್ತ ಜನರ ಗುಂಪುಸೇರಿದ್ದನ್ನು ಕಂಡ. ಆ ಗುಡಿಸಲಿನಲ್ಲಿ ವಾಸ ಮಾಡುತ್ತಿದ್ದ ಮಾರ್ಗರೇಟ್ ಕ್ರೊಂಜಿಯರ್‌ಗಳ ಕೊಲೆಯಾಗಿತ್ತು. ಹತ್ಯೆಯ ಬಗ್ಗೆ ವಿವಿಧ ಊಹಾ ಪೋಹಗಳ ಮಧ್ಯೆ ಮುಖ್ಯವಾಗಿ ಇತ್ತೀಚೆಗೆ ದರೋಡೆ ಮಾಡುತ್ತಾ ಜನಗಳನ್ನು ಹೆದರಿಸುತ್ತಾ ಓಡಾಡುತ್ತಿದ್ದ ಮೂರು ನಾಲ್ಕು ಜನ ಜಿಪ್ಸಿಗಳ ವಿದ್ರೋಹಿ ಗುಂಪಿನ ಬಗ್ಗೆ ಹೆಚ್ಚಿನ ಸಂಶಯ ತೋರಿ ಬರುತ್ತಿತ್ತು.

ಗುಂಪಿನಲ್ಲಿ ನಡೆಯುತ್ತಿದ್ದ ಈ ಸಂಭಾಷಣೆಯನ್ನು ಕುರಿಕಾಯುವ ಬಾಲಕ ಆಲಿಸಿದ. ಮತ್ತು ಕೊಲೆಯಾಗಿದ್ದ ಮನೆಯ ಸುತ್ತ ಒಂದು ವಿಶಿಷ್ಟ ರೀತಿಯ ಹೆಜ್ಜೆಯ ಗುರುತನ್ನು ಗಮನಿಸಿದ. ಆ ಗುರುತುಗಳು ತಾನು ಕಾಡಿನಲ್ಲಿ ನೋಡಿದ ಅಪರಿಚಿತನ ಬೂಟಿನ ಗುರುತಿಗೆ ಹೋಲುತ್ತವೆಂದು ಅವನ ಸೂಕ್ಷ್ಮ ಬುದ್ಧಿ ಹೇಳಿತು. ಆ ವ್ಯಕ್ತಿಗೂ ಈ ಕೊಲೆಗೂ ಸಂಬಂಧವಿರಬಹುದೆಂದು ಬಾಲಕ ಗ್ರಹಿಸಿದ.

ಒಬ್ಬ ಅಸಹಾಯಕ ವೃದ್ಧೆಯ ಹತ್ಯೆ ಮಾಡಿರುವ ಕೊಲೆಗಾರನ ಬಗ್ಗೆ ಕ್ರೋಧಮೂಡಿ ಅವನಲ್ಲಿದ್ದ ಶೌರ್ಯವನ್ನು ಜಾಗೃತಗೊಳಿಸಿತು. ತಪ್ಪಿತಸ್ಥನು ಯಾರೇ ಆಗಿರಲಿ ಅವನಿಗೆ

ಸರಿಯಾದ ಶಿಕ್ಷೆ ಆಗಲೇಬೇಕೆಂದು ನಿಶ್ಚಯಿಸಿದ.

ಕೊಲೆಗಾರ ಮತ್ತು ಅವನ ಸಂಗಡಿಗರು ತನಗೆ ತೊಂದರೆ ಮಾಡಬಹುದು ಅಥವಾ ಕೊಲ್ಲಬಹುದೆಂಬ ಅರಿವಿದ್ದರೂ ಭಯವನ್ನು ಬದಿಗಿಟ್ಟು ಪೊಲೀಸ್ ಕಾನ್‌ಸ್ಟೆಬಲ್‌ನ ಬಳಿಗೆ ಹೋಗಿ ಈ ಕೂಡಲೇ ಹೊರಟರೆ ವೃದ್ಧೆಯ ಮನೆಯ ಸುತ್ತ ಕಂಡುಬರುವ ಬೂಟಿನ ಗುರುತಿರುವ ವ್ಯಕ್ತಿಯು ಸಿಕ್ಕುವ ಸಾಧ್ಯತೆಗಳಿವೆ ಎಂದು ತೋರಿಸುವುದಾಗಿ ತಿಳಿಸಿದನು.

ಕೊಲೆಗಾರನು ಕೊಲೆ ನಡೆದ ಸ್ಥಳದಿಂದ ಕಾಡಿನ ಹಾದಿಯಲ್ಲಿ ಕ್ರಮಿಸಿ ತಾನು ಯಾರಿಂದಲೂ ಹಿಂಬಾಲಿಸಲಾಗದಷ್ಟು ದೂರಸಾಗಿದ್ದೇನೆಂದು ಭಾವಿಸಿದ್ದ.

ಆ ಕುರಿಕಾಯುವ ಹುಡುಗನನ್ನು ಬಿಟ್ಟರೆ ಮತ್ತಾರೂ ಅವನನ್ನು ನೋಡಿರಲಿಲ್ಲ. ಆ ಬಾಲಕನು ಅಷ್ಟು ದೂರ ಸಾಗಿ ಮತ್ತೆ ಹಿಂದಿರುಗಿ ಬರುವ ಸಾಧ್ಯತೆಗಳು ಅತೀ ವಿರಳವಾದ್ದರಿಂದ ಅವನು ಯಾವುದೇ ಮುಂಜಾಗ್ರತೆಯನ್ನು ವಹಿಸಿರಲಿಲ್ಲ.

ಆದರೆ ಗುಡ್ಡಗಾಡಿನಲ್ಲಿ ಬೆಳೆದ ಆ ಆರೋಗ್ಯವಂತ ಬಾಲಕನು ಪೊಲೀಸರೊಂದಿಗೆ ಚುರುಕಾಗಿ ಹಾದಿಯನ್ನು ಕ್ರಮಿಸಿ ಆ ಅಪರಿಚಿತನನ್ನು ದಸ್ತಗಿರಿ ಮಾಡುವಲ್ಲಿ ಯಶಸ್ವಿಯಾದನು. ಹಂತಕನ ಹೆಸರು ಜಿಪ್ಸಿವಿಲ್ಸಿ ವಿಂಟರ್.

ವಿಲ್ಸಿವಿಂಟರ್‌ನನ್ನು ನ್ಯಾಯಾಲಯದಲ್ಲಿ ಹಾಜರು ಪಡಿಸಿ, ಹತ್ಯೆಯನ್ನು ಸಾಬೀತು ಪಡಿಸಿ ನ್ಯೂಕ್ಯಾಸ್ಲ್‌ನಲ್ಲಿ ನೇಣುಹಾಕಲಾಯಿತು. ಅಂದಿನ ಪದ್ಧತಿಯಂತೆ ಕೊಲೆಯಾದ ಸ್ಥಳದ ಸಮೀಪ ಅವನ ದೇಹವನ್ನು ತೂಗಿಸಲಾಯಿತು.

ವಿಲ್ಸಿವಿಂಟರ್‌ನ ಜತೆಗಾರರಾದ ಮತ್ತಿಬ್ಬರು ಜಿಪ್ಸಿಗಳನ್ನು ಕದ್ದ ಮಾಲಿನೊಂದಿಗೆ ದಸ್ತಗಿರಿ ಮಾಡಿ ಅವರನ್ನು ನ್ಯೂಕ್ಯಾಸ್ಲ್‌ನಲ್ಲಿ ನೇಣುಹಾಕಲಾಯಿತು.

ಆದರೆ ಬಾಲಕ ರಾಬರ್ಟ್‌ಗೆ ವಿಂಟರ್ ಮತ್ತು ಅವನ ಸಂಗಡಿಗರಿಗೆ ವಿಧಿಸಲಾದ ಶಿಕ್ಷೆಯಿಂದ ಮತ್ತೊಬ್ಬರಿಗೆ ತನ್ನಿಂದ ತೊಂದರೆಯಾಯಿತೆಂದು ಮನಸ್ಸು ವಿಚಲಿತಗೊಂಡಿತು.

ಸ್ಥಳೀಯ ನ್ಯಾಯಾಧೀಶರು ಬಾಲಕನನ್ನು ಕರೆಸಿ ಆ ಕೊಲೆಗಾರರನ್ನು ಬಂಧಿಸುವಲ್ಲಿ ಸಹಾಯ ಮಾಡಿ ಭವಿಷ್ಯದಲ್ಲಿ ಬಹಳಷ್ಟು ಮಂದಿಯನ್ನು ಕಷ್ಟದಿಂದ ಪಾರು ಮಾಡಿ ಸಮಾಜಕ್ಕೆ ಒಂದು ಮಹದುಪಕಾರ ಮಾಡಿದ್ದಕ್ಕಾಗಿ ಅವನನ್ನು ಅಭಿನಂದಿಸಿದರು.

"ನಿನಗೆ ಬರಬಹುದಾದ ಅಪಾಯ ಮತ್ತು ವ್ಯಥೆಗಳನ್ನು ಲೆಕ್ಕಿಸದೆ ನೀನು ನಿನ್ನ ಕರ್ತವ್ಯವನ್ನು ಮಾಡಿದ್ದೀಯೆ, ಇದಕ್ಕಾಗಿ ನಿನಗೆ ವಿಷಾದಿಸಬೇಡ. ನ್ಯಾಯವನ್ನು ದೊರಕಿಸಿಕೊಡುವುದಕ್ಕಾಗಿ ಪೊಲೀಸರಿಗೆ ಸಹಾಯ ಮಾಡುವುದು ಎಲ್ಲಾ ಸತ್ಪ್ರಜೆಗಳ ಕರ್ತವ್ಯ. ಇದಕ್ಕಾಗಿ ನಮ್ಮ ಪ್ರಾಣವನ್ನೇ ತ್ಯಜಿಸಬೇಕಾಗಿ ಬಂದರೂ ನಾವು ಅಂಜಬಾರದು" ಅಂದರು.

ಒಬ್ಬ ಸಾಮಾನ್ಯ ಬಾಲಕನ ಸಮಯ ಪ್ರಜ್ಞೆ, ಧೈರ್ಯ, ಸೂಕ್ಷ್ಮಮತಿ, ತರ್ಕಬದ್ಧತೆ, ಪರೀಕ್ಷಾದೃಷ್ಟಿ, ಕಷ್ಟಸಹಿಷ್ಣುತೆ ಮತ್ತು ಕೆಟ್ಟದ್ದನ್ನು ಖಂಡಿಸುವ ಗುಣಗಳು ಎಲ್ಲಾ ಬಾಲಕರಿಗೂ ತಮ್ಮ ಕರ್ತವ್ಯಗಳನ್ನು ಪಾಲಿಸುವಲ್ಲಿ ತಾವು ತೋರಬೇಕಾದ ಸ್ಥೈರ್ಯದ ಬಗ್ಗೆ ಒಂದು ಉದಾಹರಣೆಯಾಗಿ ಉಳಿಯುತ್ತದೆ.

ಇದೇರೀತಿ ನೀವು ಕೂಡಾ. ನಿಮ್ಮ ನಡವಳಿಕೆಗಳನ್ನು ಇತರರು ಗಮನಿಸುತ್ತಿರುತ್ತಾರೆ ಮತ್ತು ನಿಮ್ಮ ಸುಕೃತ್ಯಗಳು ನಿಮ್ಮ ನಂತರವು ಬಹಳ ಸಮಯದ ತನಕ ಜನರ ಮನಸ್ಸಿನಲ್ಲಿ ಉಳಿಯುತ್ತವೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆದ್ದರಿಂದ ಎಲ್ಲಾ ಸಮಯದಲ್ಲೂ ನಿಮ್ಮ ಕರ್ತವ್ಯವನ್ನು ನೀವು ಸಮಂಜಸವಾಗಿ ನಿಭಾಯಿಸಬೇಕು.

## ಆ. ಜೂಲು ಯೋಧನ ಕಠಿಣ ಪರೀಕ್ಷೆ

ಆಫ್ರಿಕಾದ ಜೂಲು ಜನಾಂಗದಲ್ಲಿ ಒಬ್ಬ ಯುವಕನು ಸ್ಕೌಟ್ ಅಥವಾ ಯೋಧನಾಗಬೇಕಾದರೆ ಅವನನ್ನು ಅತಿ ಕಠಿಣ ಮತ್ತು ಕ್ರೂರ ಪರೀಕ್ಷೆಗೆ ಗುರಿಪಡಿಸಲಾಗುತ್ತಿತ್ತು. ಒಬ್ಬ ಬಾಲಕನು ಯೋಧನಾಗುವ ವಯಸ್ಸನ್ನು ತಲುಪಿದಾಗ ಅವನ ವಸ್ತ್ರಗಳನ್ನೆಲ್ಲಾ ತೆಗೆದು, ಸಸ್ಯಗಳಿಂದ ತೆಗೆದ ಒಂದು ರೀತಿಯ ಬಿಳಿಬಣ್ಣವನ್ನು ಮೈಗೆಲ್ಲಾ ಲೇಪಿಸಿ, ತನ್ನನ್ನು ತಾನು ರಕ್ಷಿಸಿಕೊಳ್ಳಲು ಅಥವಾ ಪ್ರಾಣಿಗಳನ್ನು ಕೊಲ್ಲಲು ಒಂದು ಭರ್ಜಿ (ಸನಾಯ್) ಮತ್ತು ಗುರಾಣಿಯನ್ನಿಟ್ಟು ಕಾಡಿಗೆ ಅಟ್ಟಲಾಗುತ್ತಿತ್ತು.

ಈ ಬಿಳಿಬಣ್ಣ ಅವನ ಮೈಮೇಲಿದ್ದಾಗ ಯಾರುಬೇಕಾದರೂ ಅವನನ್ನು ಭೇಟಿಯಾಡಿ ಕೊಲ್ಲಬಹುದಿತ್ತು. ತೊಳೆದು ತೆಗೆಯಲಾಗದ ಈ ಬಣ್ಣ ಮಾಸಲು ಸುಮಾರು ಒಂದು ತಿಂಗಳಾದರೂ ಬೇಕಾಗುತ್ತಿತ್ತು.

ಆ ಒಂದು ತಿಂಗಳು ಯುವಕನು ಅಡವಿಯಲ್ಲಿ ಅಡಗಿಕೊಂಡು ತನ್ನ ಸ್ವಸಾಮರ್ಥ್ಯದಿಂದ ಬದುಕುಳಿಯಬೇಕಾಗುತ್ತಿತ್ತು. ತನ್ನ ಆಹಾರ ಮತ್ತು ವಸ್ತ್ರಕ್ಕಾಗಿ

ಜಿಂಕೆಗಳ ಜಾಡನ್ನು ಹಿಂಬಾಲಿಸಿ ಅವುಗಳ ಗಮನಕ್ಕೆ ಬಾರದ ಹಾಗೆ ಸಮೀಪಿಸಿ ತನ್ನ ಭರ್ಜಿಯಿಂದ ಅದನ್ನು ಕೊಲ್ಲಬೇಕಾಗುತ್ತಿತ್ತು. ಎರಡು ಕಡ್ಡಿಗಳನ್ನು ಉಜ್ಜಿ ಆಹಾರವನ್ನು ಬೇಯಿಸಿಕೊಳ್ಳಲು ಬೆಂಕಿ ಮಾಡಿಕೊಳ್ಳಬೇಕಾಗಿತ್ತು. ಅವನ ಹತ್ತಿರ ಬೆಂಕಿಪೊಟ್ಟಣವಿರತ್ತಿರಲಿಲ್ಲ. ಒಂದು ವೇಳೆ ಇದ್ದಿದ್ದರೂ ಅದನ್ನು ಇಟ್ಟುಕೊಳ್ಳಲು ಜೇಬಿರಲಿಲ್ಲ. ತನ್ನನ್ನು ಭೇಟಿಯಾಡಲು ಕಾಯುತ್ತಿದ್ದ ಇತರೆ ಜೂಲುಗಳ ಗಮನಕ್ಕೆ ಬರುವಷ್ಟು ಹೊಗೆ ಏಳದ ಹಾಗೆ ಎಚ್ಚರಿಕೆ ವಹಿಸಬೇಕಾಗುತ್ತಿತ್ತು.

ತನ್ನನ್ನು ಹಿಂಬಾಲಿಸಿದವರಿಂದ ತಪ್ಪಿಸಿಕೊಳ್ಳಲು ಬಹುದೂರ ಓಡಬೇಕಾಗುತ್ತಿತ್ತು. ಮರಗಳನ್ನು ಹತ್ತಬೇಕಾಗುತ್ತಿತ್ತು. ಮತ್ತು ನದಿಗಳನ್ನು ಈಜಿ ದಾಟಬೇಕಾಗುತ್ತಿತ್ತು. ಸಿಂಹ ಮತ್ತಿತರ ಕ್ರೂರ ಮೃಗಗಳನ್ನು ಎದುರಿಸುವ ಧೈರ್ಯ ಬೇಕಾಗಿತ್ತು.

ಸಸ್ಯಗಳಲ್ಲಿ ಯಾವುವು ತಿನ್ನಲು ಯೋಗ್ಯವಾದವು? ಮತ್ತು ಯಾವುದು ವಿಷಕಾರಿ? ಅವುಗಳನ್ನು ಬೇಯಿಸುವ ವಿಧಾನದ ಅರಿವಿರಬೇಕಾಗಿತ್ತು.

ಯಾರ ಕಣ್ಣಿಗೂ ಬೀಳದ ಹಾಗೆ ಒಂದು ಗುಡಿಸಲು ನಿರ್ಮಿಸಿಕೊಂಡು ಮರಗಳ ತೊಗಟೆ ಅಥವಾ ಮಣ್ಣಿನಿಂದ ಅಡುಗೆ ಮಾಡಲು ಮಡಕೆಯನ್ನು ಮಾಡಿಕೊಳ್ಳಬೇಕಾಗಿತ್ತು.

ಯಾರಾದರೂ ತನ್ನನ್ನು ಹಿಂಬಾಲಿಸಬಹುದೆಂಬ ಹೆದರಿಕೆಯಿಂದ ಹೋದ ಕಡೆಯೆಲ್ಲಾ ತನ್ನ ಹೆಜ್ಜೆ ಗುರುತು ಬೀಳದ ಹಾಗೆ ಜಾಗ್ರತೆ ವಹಿಸಬೇಕಾಗಿತ್ತು. ಮಲಗಿದಾಗ ಗೊರಕೆ ಹೊಡೆದರೆ ಯಾವನಾದರೂ ಚುರುಕು ಶ್ರವಣ ಶಕ್ತಿ ಇರುವ ಶತ್ರುವಿಗೆ ಸಿಕ್ಕಿಕೊಳ್ಳುವ ಸಾಧ್ಯತೆಗಳಿತ್ತು. ಆದ್ದರಿಂದ ಅವನು ಸದಾ ಬಾಯಿಯನ್ನು ಮುಚ್ಚಿಕೊಂಡು ಮೂಗಿನಿಂದ ಶಬ್ದವಾಗದ ಹಾಗೆ ಉಸಿರಾಡುವುದನ್ನು ಅಭ್ಯಾಸ ಮಾಡುತ್ತಿದ್ದ. ಒಂದು ತಿಂಗಳ ಕಾಲ ಉರಿಬಿಸಿಲು, ಮಳೆ ಮತ್ತು ಗಾಳಿಗಳನ್ನು ಸಹಿಸಿಕೊಂಡು ಬದುಕಬೇಕಾಗಿತ್ತು.

ಬಿಳಿಯ ಬಣ್ಣ ಪೂರ್ಣ ಮಾಸಿದ ಮೇಲೆ ತನ್ನ ಹಳ್ಳಿಗೆ ಹಿಂತಿರುಗಿದ ಅವನನ್ನು ಸಂಭ್ರಮದಿಂದ ಬರಮಾಡಿಕೊಂಡು ಇತರ ಯೋಧರಲ್ಲಿ ಒಬ್ಬನಾಗಿ ಸ್ವೀಕರಿಸಲಾಗುತ್ತಿತ್ತು.

ಅವನು ತನ್ನ ಸಾಮರ್ಥ್ಯದಿಂದ 'ರಿಂಗ್ ಕಾಫ್' ಅಂದರೆ ಉತ್ತಮ ಯೋಧನಾಗಿ ಇತರ ಗೌರವವನ್ನು ಪಡೆಯಬಹುದಾಗಿತ್ತು ಆ ಹಂತದಲ್ಲಿ ಅವನು ತನ್ನ ತಲೆಯ ಸುತ್ತ ಒಂದು ಪಟ್ಟಿಯನ್ನು ಧರಿಸಲು ಅರ್ಹನಾಗುತ್ತಿದ್ದ. ಉತ್ತಮ ಯೋಧನಾದರೆ ತದನಂತರ ಅತ್ಯುತ್ತಮ ಯೋಧನಿಗೆ ದೊರೆಯುವ 'ತೋಳ' ಎನ್ನುವ ಬಿರುದನ್ನು ಹೊಂದುತ್ತಿದ್ದ.

ಇದರ ಇನ್ನೊಂದು ಮುಖವೆಂದರೆ ಈ ರೀತಿ ಕಾಡಿಗೆ ಹೋದ ಬಹಳಷ್ಟು ಯುವಕರು ಬಿಳಿಬಣ್ಣ ಮಾಸುವ ತನಕ ಬದುಕುತ್ತಲೇ ಇರಲಿಲ್ಲ. ವನ್ಯ ಪ್ರಾಣಿಗಳು ಮುಗಿಸುತ್ತಿದ್ದವು. ಅಥವಾ ಅದೇ ಜನಾಂಗದ ಇತರರಿಂದ ಕೊಲ್ಲಲ್ಪಡುತ್ತಿದ್ದರು. ಅಥವಾ ಹಸಿವಿನಿಂದ ಅಸುನೀಗುತ್ತಿದ್ದರು. ಇಲ್ಲವೇ ನೀರಿನಲ್ಲಿ ಮುಳುಗಿ ಸಾಯುತ್ತಿದ್ದರು. ಅವರಲ್ಲಿ ಸಮರ್ಥರು ಮಾತ್ರ ಈ ಎಲ್ಲಾ ಅಪಾಯಗಳಿಂದ ಪಾರಾಗಿ ಬದುಕುಳಿದು ಬರುತ್ತಿದ್ದರು. ಅವರು ನಿಜವಾಗಿಯೂ ಒಳ್ಳೆಯ ಯೋಧರಾಗುತ್ತಿದ್ದರು.

ಎಂತಹ ಪರೀಕ್ಷೆ! ಅಲ್ಲವೇ?

## ೯. "ಕುರುಡು ಒಂಟೆ"

ಸುಮಾರು ೧೬೦೦ ವರ್ಷಗಳ ಹಿಂದೆ ಬರೆಯಲಾದ ಹಿಬ್ರೂ ಪುಸ್ತಕ 'ದಿ ತಾಲ್ ಬುಡ್' ಇಲ್ಲಿ ವಿವರಿಸಲಾದ ಜಾಡು ಹಿಡಿಯುವ ಪ್ರಸಂಗ.

ಮೊದಲ ಪ್ರಸಂಗ ತಾಲ್ ಮುಡಿಕಲ್ ಪುಸ್ತಕ ಸ್ಲಾನ್ ಹೆಡ್ರಿನ್‌ನಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಕಾರ್ಮೆಲ್ ಪರ್ವತಗಳ ಶ್ರೇಣಿಯಲ್ಲಿ ಇಬ್ಬರು ಬಂಧನದಲ್ಲಿದ್ದ ಗುಲಾಮರು ಸಾಗುತ್ತಿದ್ದರು. ಹಿಂದೆ ಬರುತ್ತಿದ್ದ ಅವರ ಮಾಲಿಕನಿಗೆ ಇಬ್ಬರ ನಡುವೆ ನಡೆದಿದ್ದ ಸಂಭಾಷಣೆ ಕಿವಿಯ ಮೇಲೆ ಬಿತ್ತು. ಒಬ್ಬನು ಮತ್ತೊಬ್ಬನಿಗೆ ಹೇಳುತ್ತಿದ್ದ "ಮುಂದೆ ಒಂದು ಕಣ್ಣು ಕುರುಡಾಗಿರುವ ಒಂಟೆಯೊಂದು ಹೋಗುತ್ತಿದೆ. ಅದರ ಮೇಲೆ ಇಬ್ಬರು ಸವಾರರಿದ್ದಾರೆ. ಅವರಲ್ಲಿ ಒಬ್ಬ ಯಹೂದಿ. ಮತ್ತೊಬ್ಬ ಸ್ಥಳೀಯ, ಒಂಟೆಗೆ ಎರಡು ಚರ್ಮದ ಚೀಲಗಳನ್ನು ತೂಗಿಸಲಾಗಿದೆ. ಅವುಗಳಲ್ಲಿ ಒಂದರಲ್ಲಿ ವೈನ್ (ದ್ರಾಕ್ಷಾರಸ) ಮತ್ತೊಂದರಲ್ಲಿ ಎಣ್ಣೆಯಿದೆ ಎಂದನು.

"ಇದೆಲ್ಲಾ ನಿಮಗೆ ಹೇಗೆ ಗೊತ್ತು? ತಲೆ ಹರಟೆಗಳಾ" ಎಂದು ರೇಗಿದ ಮಾಲೀಕ.

ಗುಲಾಮರು ವಿವರಿಸಿದರು. ಹುಲ್ಲು ಒಂದು ಕಡೆ ಮಾತ್ರ ತಿನ್ನಲ್ಪಟ್ಟಿದೆ. ಆದ್ದರಿಂದ ಅದರ ಒಂದು ಕಣ್ಣು ಕುರುಡಾಗಿದೆ. ಒಂದು ಕಡೆ ಬಿದ್ದಿರುವ ವೈನ್ ಹನಿಗಳು ಪೂರ್ಣವಾಗಿ ನೆಲಕ್ಕೆ ಇಳಿದಿವೆ. ಆದರೆ ಇನ್ನೊಂದು ಕಡೆ ಮರಳಿನ ಮೇಲೆ ಕಾಣುವ

ಜನಿಗಳು ಎಣ್ಣೆಯವು. ಕಾಲುದಾರಿಯಿಂದ ದೂರ ಹೋಗಿ ಮೂತ್ರ ವಿಸರ್ಜನೆ ಮಾಡಿರುವವನು ಯಹೂದಿ. ಮತ್ತೊಬ್ಬ ರಸ್ತೆಯಲ್ಲೇ ಮೂತ್ರ ವಿಸರ್ಜಿಸಿರುವುದರಿಂದ ಅವನು ಸ್ಥಳೀಯ ಎಂದು ವಿಶ್ಲೇಷಿಸಿದರು.

ಎರಡನೆಯ ಪ್ರಸಂಗ 'ಏಖಾರಬ್ಬಾ' ಎನ್ನುವ ತಾಲ್ ಮುಡಿಕಲ್ ಪುಸ್ತಕದಲ್ಲಿ ಉಲ್ಲೇಖವಾಗಿದೆ.

ವಣಿಕನೊಬ್ಬ ತನ್ನ ಸ್ವಂತ ಊರಿಗೆ ತೆರಳುವ ತನ್ನ ದೀರ್ಘ ಪ್ರಯಾಣದಲ್ಲಿ ಜತೆಯಲ್ಲಿ ಒಯ್ಯಲು ಒಬ್ಬ ಸೇವಕನನ್ನು ಕೊಂಡು ಕೊಂಡ. ಈ ಗುಲಾಮನು ಕುರುಡನೆಂದು ಹಣವನ್ನು ತೆತ್ತಮೇಲೆ ತಿಳಿದು ಹೌಹಾರಿದ. ಸೇವಕನನ್ನು ಮಾರಿದವನು ಸಮಾಧಾನ ಹೇಳಿದ ''ಅವನು ಒಕ್ಕಣ್ಣನಾದರೂ ಎರಡು ಕಣ್ಣಿದ್ದವರಿಗಿಂತ ಒಳ್ಳೆಯ ದೃಷ್ಟಿಯಿದೆ'ಎಂದು.

ಸೇವಕನೊಡಗೂಡಿ ಮಾಲಿಕನು ತನ್ನ ಪ್ರಯಾಣವನ್ನು ಪ್ರಾರಂಭಿಸಿದ.

ಸ್ವಲ್ಪದೂರ ಸಾಗಿದ ನಂತರ ಸೇವಕ ಹೇಳಿದ 'ಮಾಲಿಕರೆ ಸ್ವಲ್ಪ ದೂರದಲ್ಲಿ ಒಬ್ಬ ವ್ಯಾಪಾರಿ ಹೋಗುತ್ತಿದ್ದಾನೆ. ನಾವು ತ್ವರೆ ಮಾಡಿದರೆ ಅವನನ್ನು ಹಿಂದೆ ಹಾಕಬಹುದು.'

''ನನಗೆ ಯಾರೂ ಕಾಣುತ್ತಿಲ್ಲವಲ್ಲ'' ಎಂದ ಮಾಲಿಕ. ನನಗೂ ಕಾಣಿಸುತ್ತಿಲ್ಲ, ಆದರೆ ಅವನು ಇಲ್ಲಿಂದ ನಾಲ್ಕು ಮೈಲು ದೂರದಲ್ಲಿ ಹೋಗುತ್ತಿದ್ದಾನೆ ಎಂದ ಸೇವಕ.

ನೀನೊಬ್ಬ ಹುಚ್ಚ, ಹತ್ತಿರದಲ್ಲಿರುವುದೇ ಸರಿಯಾಗಿ ಕಾಣದಿರುವಾಗ ಅಷ್ಟು ದೂರದಲ್ಲಿರುವುದು ನಿನಗೆ ಕಾಣುವುದು ಹೇಗೆ ಸಾಧ್ಯ? ಎಂದು ಗೇಲಿ ಮಾಡಿದ ಮಾಲಿಕ.

ಗುಲಾಮನೆಂದ, ನಾನು ಹುಚ್ಚನಲ್ಲ, ಆದರೂ ನಾನು ಹೇಳಿದಂತೆಯೇ ಇರುವುದು ಸತ್ಯ. ಅದಲ್ಲದೆ ಆ ಪ್ರಯಾಣಿಕನ ಜತೆಯಲ್ಲಿ ಒಂದು ಗಬ್ಬದ ಕತ್ತೆಯಿದೆ. ಆ ಕತ್ತೆಯೂ ನನ್ನ ಹಾಗೆ ಒಂದು ಕಣ್ಣು ಕುರುಡು. ಆ ಕತ್ತೆ ಎರಡು ಚರ್ಮದ ಚೀಲಗಳಲ್ಲಿ ವಿನೇಗರ್ ಮತ್ತು ಮಧ್ಯವನ್ನೊಯ್ಯುತ್ತಿದೆ ಎಂದ.

ಈ ಗುಲಾಮನಿಗೆ ಹುಚ್ಚು ಹಿಡಿದಿದೆ. ಅಥವಾ ನನ್ನನ್ನೂ ಹಾಸ್ಯ ಮಾಡುತ್ತಿದ್ದಾನೆ! ಎಂದು ಮಾಲಿಕನಿಗೆ ವಿಪರೀತ ಸಿಟ್ಟು ಬಂದಿತು.

ಅವರು ಪ್ರಯಾಣವನ್ನು ಮುಂದುವರಿಸಿ, ಮುಂದೆ ಸಾಗುತ್ತಿದ್ದ ವರ್ತಕನನ್ನು ಹಿಂದೆ ಹಾಕಿ ನಡೆದರು. ಗಮನಿಸಿದಾಗ ಎಲ್ಲವೂ ಗುಲಾಮ ಹೇಳಿದಂತೆಯೇ ಇತ್ತು. ಅತ್ಯಾಶ್ಚರ್ಯದಿಂದ ''ನಿನಗಿದೆಲ್ಲ ಹೇಗೆ ಹೊಳೆಯಿತು''? ಎಂದು ಕೇಳಿದ್ದಕ್ಕೆ ಸೇವಕ ವಿವರಿಸಿದ.

''ಕತ್ತೆಯ ಹೆಜ್ಜೆ ಗುರುತನ್ನು ನೋಡಿ ಅವರು ಹೋಗುತ್ತಿರಬಹುದಾದ ದೂರವನ್ನು ನಾನು ಊಹಿಸಿದೆ. ತೀರಾ ಹತ್ತಿರವಿದ್ದರೆ ಹೆಜ್ಜೆ ಗುರುತು ಸ್ಪಷ್ಟವಾಗಿಯೂ, ಅತಿ ದೂರವಿದ್ದರೆ ಹೆಚ್ಚು ಅಸ್ಪಷ್ಟವಾಗಿಯೂ ಕಾಣುತ್ತಿತ್ತು. ಒಂದೇ ಕಡೆ ಹುಲ್ಲು ತಿಂದಿರುವುದರಿಂದ ಅದರ ಒಂದು ಕಣ್ಣು ಕಾಣಿಸುವುದಿಲ್ಲವೆಂದು ತಿಳಿಯುತ್ತದೆ. ಕತ್ತೆ ಒಂದು ಕಡೆ ವಿಶ್ರಮಿಸಿದಾಗ ಅದರ ಗಾತ್ರದಿಂದ ಅದು ಗಬ್ಬವೆಂದು ಹೇಳಬಹುದು. ಮರಳಿನ ಮೇಲೆ ಬಿದ್ದಿದ್ದ ದ್ರವಗಳಲ್ಲಿ ಒಂದರಲ್ಲಿ ಸಣ್ಣ ಸಣ್ಣ ನೊರೆಯಿದ್ದದ್ದು ಹೆಂಡ ಮತ್ತು ಮರಳಿನ ಮೇಲೆ ಹನಿಯಾಗಿ ನಿಂತಿದ್ದನ್ನು ಎಣ್ಣೆ ಎಂದ.''

ಹೀಗೆ ಕುರುಹುಗಳನ್ನು ನೋಡಿ ಒಂದು ತೀರ್ಮಾನಕ್ಕೆ ಬರುವುದು ನಮ್ಮ ಬುದ್ಧಿವಂತಿಕೆ ಮತ್ತು ತರ್ಕ ಬದ್ಧತೆಯನ್ನು ಅವಲಂಬಿಸಿದೆ. ಅಭ್ಯಾಸದಿಂದ ಹೆಚ್ಚು ನಿಖರವಾಗಿ ಊಹಿಸಬಹುದು. ಬೇಡನ್‌ಪೊವೆಲ್ ಅವರ ಪ್ರಕಾರ ''ನಮ್ಮ ತಲೆಯ ಹಿಂಭಾಗದಲ್ಲಿ ಕಣ್ಣಿರಬೇಕು'' ಎಂಬುದು ಎಷ್ಟು ಸತ್ಯ !

## ೧೦ ಕಳೆದು ಹೋದ ಯೋಧ

ಭಾರತೀಯ ಸೇನಾ ಪಡೆಯ ಅಶ್ವಾರೋಹಿ ಸೈನಿಕನೊಬ್ಬ ಕಳೆದು ಹೋಗಿದ್ದ ಅವನಿಗಾಗಿ ಅವನ ಸಹಯೋಗಿಗಳು ಎಲ್ಲ ಕಡೆ ಹುಡುಕುತ್ತಿದ್ದರು. ದಾರಿಯಲ್ಲಿ ಸಿಕ್ಕಿದ್ದ ಬಾಲಕನೊಬ್ಬನನ್ನು ಕಳೆದು ಹೋದ ವ್ಯಕ್ತಿಯೊಬ್ಬನನ್ನು ನಾವು ಹುಡುಕುತ್ತಿದ್ದೇವೆ. ನೀನೇನಾದರೂ ಅವನನ್ನು ಕಂಡೆಯಾ ? ಎಂದು ಕೇಳಿದರು. ಅದಕ್ಕೆ ಬಾಲಕನು ಕಂದು ಮತ್ತು ಬಿಳಿ ಮಿಶ್ರವರ್ಣದ ಕುಂಟು ಕುದುರೆಯ ಮೇಲೆ ಸವಾರಿ ಮಾಡುತ್ತಿದ್ದ ಉದ್ದ ಯೋಧನೆ?'' ಎಂದು ಕೇಳಿದ.

ಸೈನಿಕರು ''ಹೌದು ಅವನೆ ಅವನನ್ನು ನೀನೆಲ್ಲಿ ನೋಡಿದೆ? ಎಂದು ಕೇಳಿದನು. ಅದಕ್ಕವನು ನಾನು ಅವನನ್ನು ನೋಡಿಲ್ಲ, ಆದರೆ ಅವನು ಯಾವಕಡೆಗೆ ಹೋಗಿದ್ದಾನೆಂದು ಬಲ್ಲೆ'' ಎಂದು ಉತ್ತರಿಸಿದನು. ಸೈನಿಕರು ಅಶ್ವಾರೋಹಿಯು ಬಹುಶಃ ಕೊಲೆಯಾಗಿರಬಹುದೆಂದು ಮತ್ತು ಇದರ ಬಗ್ಗೆ ಬಾಲಕನಿಗೆ ಗೊತ್ತಿರಬಹುದೆಂದು ಅವನನ್ನು ದಸ್ತಗಿರಿ ಮಾಡಿದರು.

ಆದರೆ ಆ ಸೂಕ್ಷ್ಮಮತಿ ಬಾಲಕನು ತಾನು ಹೇಗೆ ಆ ತೀರ್ಮಾನಕ್ಕೆ ಬಂದನೆಂದು ವಿವರಿಸಿದ. ಅವನು ಕುದುರೆ ಹೆಜ್ಜೆ ಗುರುತನ್ನು ಗಮನಿಸಿದ್ದ. ಗೊರಸಿನ ಗುರುತನ್ನು ತೋರಿಸುತ್ತಾ ಒಂದು ಕಡೆ ಸವಾರನು ವಿಶ್ರಮಿಸಿದ್ದು ಆ ಸ್ಥಳಕ್ಕೆ ಕರೆದುಕೊಂಡು ಬಂದ. ಅಲ್ಲಿ ಕುದುರೆಯು ಒಂದು ಮರಕ್ಕೆ ಮೈ ಉಜ್ಜಿಕೊಂಡಿತ್ತು. ಆ ಮರದ ತೊಗಟೆಗೆ ಅಂಟಿಕೊಂಡಿದ್ದ ಬಿಳಿ ಕಂದು ಕೂದಲುಗಳಿಂದ ಕುದುರೆಯ ಬಣ್ಣವನ್ನು ಅರಿತಿದ್ದಾಗಿ ಹೇಳಿದ. ಗೊರಸುಗಳ ಗುರುತನ್ನು ಗಮನಿಸಿದಾಗ ಒಂದು ಕಾಲಿನ ಹೆಜ್ಜೆ ಗುರುತು ಮಾತ್ರ ಆಳವಾಗಿ ಮೂಡಿರಲಿಲ್ಲ. ಆದ್ದರಿಂದ ಅದು ಕುಂಟುತ್ತಿತ್ತೆಂದು ವಿವರಿಸಿದ.

ಸವಾರನು ಒಬ್ಬ ಯೋಧನೆಂದು ಅವನ ಬೂಟಿನ ಗುರುತಿನಿಂದ ಗೊತ್ತಾಗಿತ್ತು.

ಸೈನಿಕರು ಹುಡುಗನನ್ನು ಪ್ರಶ್ನಿಸಿದರು. ''ಅವನು ಎತ್ತರವಾಗಿದ್ದನೆಂದು ಹೇಗೆ ಹೇಳಿದೆ''? ಆಗ ಮುರಿದಿದ್ದ ಮರದ ಒಂದು ಟೊಂಗೆಯನ್ನು ತೋರಿಸಿ, ಅದನ್ನು ಸಾಮಾನ್ಯ ಎತ್ತರದ ವ್ಯಕ್ತಿ ಮುರಿಯಲು ಸಾಧ್ಯವಿಲ್ಲವೆಂದನು.

ಪತ್ತೆದಾರಿಕೆ ಹಾಗೂ ತರ್ಕಬದ್ಧತೆ ಒಂದು ಪುಸ್ತಕವನ್ನು ಓದಿದ ಹಾಗೆ.

ಓದಲೂ ಬಾರದೆ ಇರುವವನೊಬ್ಬ ನೀವು ಓದುವುದನ್ನು ನೋಡಿ ಆಶ್ಚರ್ಯಪಟ್ಟು ಇದು ಹೇಗೆ ಸಾಧ್ಯ? ಎಂದು ಕೇಳಬಹುದು. ಬರವಣಿಗೆ ಎಂದರೆ ಸಣ್ಣ ಸಣ್ಣ ಸಂಕೇತಗಳು ಕೂಡಿ ಒಂದು ವಿಷಯವಾಗುತ್ತದೆ. ಎಂದು ಹೇಳಬಹುದು. ಅಕ್ಷರಗಳು ಪದಗಳಾಗುತ್ತವೆ. ಪದಗಳು ವಾಕ್ಯಗಳಾಗುತ್ತವೆ ಹಾಗೂ ವಾಕ್ಯಗಳು ಒಂದು ಅರ್ಥವನ್ನು ಕೊಡುತ್ತವೆ.

ಅದೇ ರೀತಿ ಸೂಕ್ಷ್ಮ ಬುದ್ಧಿ ಮತ್ತು ತರ್ಕಬದ್ಧತೆಯನ್ನು ಉಪಯೋಗಿಸುವ ತರಬೇತು ಹೊಂದಿರುವ ಒಬ್ಬ ಸ್ಕೌಟ್ ಕುರುಹುಗಳನ್ನು ಸಂಗ್ರಹಿಸಿ ಅವುಗಳನ್ನು ಒಟ್ಟಿಗೆ ಸೇರಿಸಿ ಅದರ ಹಿಂದೆ ಅಡಗಿರುವ ರಹಸ್ಯಗಳನ್ನು ಅರ್ಥೈಸುತ್ತಾನೆ. ಒಬ್ಬ ತರಬೇತಿಯಿಲ್ಲದ ವ್ಯಕ್ತಿಗೆ ಇದು ಅಸಾಧ್ಯ.

ನಿರಂತರ ತರಬೇತಿಯಿಂದ ಅವನು ಕೇವಲ ಒಂದು ನೋಟದಿಂದ ನೀವು ಪುಸ್ತಕವನ್ನು ಓದಿದಷ್ಟು ಸುಲಭವಾಗಿ ಅರ್ಥವನ್ನು ಹುಡುಕುತ್ತಾನೆ.

## ೧೧ ಆ ಒಂದು ಎಲೆ

ಆಫ್ರಿಕಾದ ಮೆಟಾಬೆಲೆ ಯುದ್ಧದ ಸಮಯದಲ್ಲಿ ಒಂದು ದಿನ ನಾನು (ಬೇಡನ್ ಪೊವೆಲ್) ಒಬ್ಬ ಆಫ್ರಿಕನನ್ನ ಜತೆಯಲ್ಲಿ ಮೆಟೋಪೊ ಗುಡ್ಡಗಳ ತಪ್ಪಲಿನ ವಿಶಾಲ ಹುಲ್ಲುಗಾವಲಿನಲ್ಲಿ ಬೇಹುಗಾರಿಕಾ (ಸ್ಕೌಟಿಂಗ್) ಕಾರ್ಯದಲ್ಲಿ ತೊಡಗಿದ್ದೆ.

ಒಂದು ಕಡೆ ಹುಲ್ಲಿನ ಮೇಲೆ ಆಗತಾನೆ ಮೂಡಿದ್ದ ಒಂದು ಕಾಲುದಾರಿಯು ನಮ್ಮ ಗಮನಕ್ಕೆ ಬಂದಿತು. ಹುಲ್ಲು ಒದ್ದೆಯಾಗಿ ಇನ್ನೂ ಹಸಿರಾಗಿ ಕಾಣುತ್ತಿತ್ತು. ವಾಲಿ, ಜನಗಳು ಯಾವ ಕಡೆಗೆ ಹೋಗಿರಬಹುದು ಎಂದು ಸೂಚಿಸುತ್ತಿತ್ತು. ಕಾಲು ದಾರಿಯನ್ನು ಸ್ವಲ್ಪ ದೂರ ಅನುಸರಿಸಿಹೋದಾಗ ಒಂದು ಕಡೆ ಮರಳಿನಿಂದ ಕೂಡಿದ ಬಯಲಿನಲ್ಲಿ ಹೆಜ್ಜೆ ಗುರುತುಗಳು ಕಾಣಿಸಿದವು. ಹೆಂಗಸರು (ಸಣ್ಣ ಪಾದಗಳು ಮತ್ತು ಹತ್ತಿರದ ಹೆಜ್ಜೆಗಳು) ಮತ್ತು ಮಕ್ಕಳು (ಡೊಂಕಾದ ಅಂಚಿರುವ ಪುಟ್ಟಪಾದಗಳು ಮತ್ತು ದೂರ ದೂರದ ಹೆಜ್ಜೆ) ನಿಧಾನವಾಗಿ ನಡೆಯುತ್ತಾ ಸುಮಾರು ೫ಮೈಲು ದೂರದ ಗುಡ್ಡದ ಕಡೆಗೆ ಹೋಗಿದ್ದವು. ಅಲ್ಲಿ ಶತ್ರುಗಳು ಅಡಗಿರಬಹುದೆಂದು ಊಹಿಸಿದೆವು.

ಆಗ ಕಾಲ್ದಾರಿಯಿಂದ ಸುಮಾರು ೧೦ಅಡಿ ದೂರದಲ್ಲಿ ಬಿದ್ದಿದ್ದ ಒಂದು ಎಲೆ ನಮ್ಮ ಕಣ್ಣಿಗೆ ಬಿದ್ದಿತು. ಸುತ್ತ ಕೆಲವಾರು ಮೈಲುಗಳು ಆ ಹೆಜ್ಜೆಗಳು ಬರುತ್ತಿದ್ದ ದಿಕ್ಕಿನಲ್ಲಿ ಇಲ್ಲಿಂದ ೧೫ ಮಾರು ದೂರವಿರುವ ಒಂದು ಹಳ್ಳಿಯಲ್ಲಿದೆ ಎಂದು ನಮಗೆ ಗೊತ್ತಿತ್ತು. ಆದ್ದರಿಂದ ಆ ಹೆಂಗಸರು ದೂರದ ಹಳ್ಳಿಯಿಂದ ಒಂದು ಗುಡ್ಡದ ಕಡೆಗೆ ಹೋಗಿರುವ ಸಾಧ್ಯತೆಗಳಿತ್ತು.

ಎಲೆಯನ್ನು ಕೈಗೆತ್ತಿಕೊಂಡಾಗ ಅದು ಒದ್ದೆಯಾಗಿತ್ತು. ಮತ್ತು ವಾಸನೆ ನೋಡಿದಾಗ ಸ್ಥಳೀಯ ನೀರಾ (ಬಿಯರ್) ದ ವಾಸನೆ ಇತ್ತು. ಮಹಿಳೆಯ ಹತ್ತಿರ ಹತ್ತಿರವಿದ್ದ ಹೆಜ್ಜೆಗಳು ಅವರು ಹೊರೆಯನ್ನು ಹೊತ್ತು ಸಾಗಿದ್ದರೆಂದು ಸಾರುತ್ತಿದ್ದವು. ಆದ್ದರಿಂದ ಈ ಮಹಿಳೆಯರು ತಮ್ಮ ಗ್ರಾಮದಿಂದ ಮಡಕೆಗಳಲ್ಲಿ ನೀರಾವನ್ನು ತುಂಬಿಕೊಂಡು ಆ ಮಡಕೆಗಳ ಬಾಯನ್ನು ಆ ಎಲೆಯಿಂದ ಕೂಡಿದ ಮರದ ಚಕ್ಕೆಗಳಿಂದ ಭದ್ರಪಡಿಸಿಕೊಂಡು ಪದ್ಧತಿಯಂತೆ ತಮ್ಮ ತಲೆಯ ಮೇಲೆ ಹೊತ್ತುಕೊಂಡು ಹೋಗಿರಬಹುದೆಂದು ಊಹಿಸಿದೆವು. ಅದರಲ್ಲಿ ಒಂದು ಎಲೆ ಬಿದ್ದು ಹೋಗಿ ಕಾಲುದಾರಿಯಿಂದ ೧೦ಅಡಿ ದೂರದಲ್ಲಿ ಬಿದ್ದಿರಬೇಕು, ಈಗ ಬೆಳಿಗ್ಗೆ ೭ಗಂಟೆ, ಗಾಳಿ ಬೀಸುತ್ತಿಲ್ಲ. ಆದರೆ ಅದು ಬೆಳಗಿನ ಜಾವ ೫ಗಂಟೆಗೆ ಸ್ವಲ್ಪ ಗಾಳಿ ಬೀಸುತ್ತಿತ್ತು.

ಈ ಎಲ್ಲಾ ಸಣ್ಣ ಸಣ್ಣ ಕುರುಹುಗಳಿಂದ ಒಂದು ಗುಂಪು
ಂಗಸರು ಮತ್ತು ಮಕ್ಕಳು ೧೫ ಮೈಲು ದೂರವಿರುವ ಹಳ್ಳಿಯಿಂದ
ಡ್ಡದ ಹಿಂದಿರುವ ಶತ್ರುಗಳ ಶಿಬಿರಕ್ಕೆ ನೀರಾ ತೆಗೆದುಕೊಂಡು
ಮಾರು ೭ಗಂಟೆಗೆ ತಲುಪಿರಬಹುದೆಂದು ಊಹಿಸಿದೆವು.

ನೀರಾ ತಲುಪಿದ ಕೂಡಲೇ ಅವರು ಅದನ್ನು ಕುಡಿಯಲು
ಪ್ರಾರಂಭಿಸಿರಬಹುದು (ಏಕೆಂದರೆ ಕೆಲವು ಗಂಟೆಗಳಲ್ಲಿ ಅದು
ಳಿಯಾಗುತ್ತದೆ) ಮತ್ತು ನಾವು ಅಲ್ಲಿಗೆ ತಲುಪುವ ಹೊತ್ತಿಗೆ
ದರ ಅಮಲಿನಲ್ಲಿರಬಹುದಾದ್ದರಿಂದ ಅಜಾಗರೂಕರಾಗಬಹುದು.
ದ್ದರಿಂದ ನಮಗೆ ಅವಲೋಕಿಸಲು ಅನುಕೂಲವಾಗಬಹುದೆಂದು
ರ್ಮಾನಿಸಿದೆವು. ನಾನು ಈ ಹೆಂಗಸರ ಹೆಜ್ಜೆ ಗುರುತುಗಳನ್ನು
ನುಸರಿಸಿ ಹೋಗಿ ಶತ್ರುಗಳ ಬಿಡಾರವನ್ನು ನೋಡಿ ನಮಗೆ
ೇಕಾದ ವಿವರಗಳನ್ನು ಸಂಗ್ರಹಿಸಿ ಹಿಂದಿರುಗಿದೆವು. ಅದೆಲ್ಲಾ
ಒಂದು ಎಲೆಯಿಂದ ಸಾಧ್ಯವಾಯಿತು. ಅತೀ ಸಾಮಾನ್ಯವಾದ
ರುಹುಗಳು ಎಷ್ಟು ಮುಖ್ಯವೆಂದು ಇದರಿಂದ ಅರ್ಥವಾಗುತ್ತದೆ.

### ೨ ಕುರುಹು ಓದುವುದು. (ತರ್ಕಬದ್ಧತೆ)

ಒಬ್ಬ ಸ್ಕೌಟ್ ಕುರುಹುಗಳನ್ನು ಒಗ್ಗೂಡಿಸಿ ತನ್ನ
ರ್ಕಬುದ್ದಿಯನ್ನು ಉಪಯೋಗಿಸಿ ಅವುಗಳಿಗೆ ಒಂದು ಅರ್ಥವನ್ನು
ಲ್ಪಿಸುವುದೇ ತರ್ಕಬದ್ಧತೆ.

ಸರಿಯಾದ ತರಬೇತಿ ದೊರೆತರೆ ಹೇಗೆ ಒಬ್ಬ ಹರೆಯದ
ಸ್ಕೌಟ್ ಬಾಲಕನು ಕುರುಹುಗಳ ಹಿಂದಿರುವ ಅರ್ಥವನ್ನು
ಡುಕಬಲ್ಲ ಎಂಬುದಕ್ಕೆ ಒಂದು ಉದಾಹರಣೆ.

### ಸಕ್ಕರೆ ಕಳ್ಳನ ಪತ್ತೆ ''

ಆಫ್ರಿಕಾದ ಕಧೀರ್ ಗ್ರಾಮದ ಅಂಗಡಿಯೊಂಧರ ಮಾಲಿಕ
ವೃದ್ಧ ಬ್ಲೆಂಕಿನ್ ಸಾಪ್, ಕಳ್ಳ ಕಳ್ಳ! ಹಿಡಿಯಿರಿ ಎಂದು ಕೂಗುತ್ತಾ
ನ್ನ ಅಂಗಡಿಯಿಂದ ಹೊರಗೆ ಓಡಿಬಂದ.

ಅವನು ಅಂಗಡಿಯಿಂದ ಒಂದು ಸಕ್ಕರೆ ಚೀಲ
ಳುವಾಗಿತ್ತು. ಆದರೆ ಹಿಡಿಯಲು ಅಲ್ಲಿ ಯಾರೂ ಇರಲಿಲ್ಲ.
ಳ್ಳತನವಾಗಿ ಬಹಳಸಮಯವೇ ಕಳೆದಿತ್ತು. ಆದರೆ ಅಂಗಡಿ
ಮಾಲಿಕನ ಗಮನಕ್ಕೆ ಬಂದದ್ದು ಈಗ.

ಸುಳಿವು ಹಿಡಿಯುವುದರಲ್ಲಿ ನಿಪುಣನಾದ ಒಬ್ಬ
ಪೋಲೀಸ್‌ನನ್ನು ಕರೆಸಲಾಯಿತು. ಆದರೆ ಅವನಿಗೆ ದೊರೆತ
ಸ್ತಾರು ಬರಿಕಾಲಿನ ಹೆಜ್ಜೆಗುರುತುಗಳಲ್ಲಿ ಕಳ್ಳನ ಹೆಜ್ಜೆಗುರುತು
ಣದಿದ್ದರೂ, ಕಲ್ಲು ಮಣ್ಣಿನ ಹಾದಿಯಲ್ಲಿ ದಾಪುಗಾಲು ಹಾಕಿದ.

ಬಹುದೂರ ಸಾಗಿದ ಮೇಲೆ ಆ ಜಾಡುಹಿಡಿಯುವವನು ಹಠಾತ್ತನೆ ನಿಂತು ದಾರಿತಪ್ಪಿದವನಂತೆ ಸುತ್ತಲೂ ನೋಡತೊಡಗಿದ. ನಂತರ ಅವನ ಮುಖದ ಮೇಲೆ ಮಂದಹಾಸ ಮೂಡಿತು. ತನ್ನ ಬೆರಳನ್ನು ಮೇಲೆತ್ತಿ ಅಲ್ಲಿಯೇ ಸಮೀಪದಲ್ಲಿದ್ದ ಒಂದು ಮರದ ಕಡೆಗೆ ತೋರಿದನು.

ಅಲ್ಲಿ ಮರದ ಕೊಂಬೆಗಳ ನಡುವೆ ಸಕ್ಕರೆ ಚೀಲದೊಂದಿಗೆ ಕಳ್ಳನು ಅವಿತು ಕುಳಿತಿದ್ದನು. ಜಾಡುಹಿಡಿಯುವವನಿಗೆ ಹೇಗೆ ಕಳ್ಳನ ಸುಳಿವು ಸಿಕ್ಕಿತು? ಹೊಳೆಯುತ್ತಿರುವ ಕೆಲವು ಸಕ್ಕರೆ ಕಣಗಳು ಅವನ ಸೂಕ್ಷ್ಮ ಕಣ್ಣಿಗೆ ಗೋಚರಿಸಿದವು. ರಂಧ್ರವಾಗಿದ್ದ ಚೀಲದಿಂದ ಸ್ವಲ್ಪ ಸಕ್ಕರೆಯು ಸೋರುತ್ತಿದ್ದುದ್ದರಿಂದ ತೆಳ್ಳಗೆ ಒಂದು ಸಕ್ಕರೆಯ ಸಾಲನ್ನು ಬಿಟ್ಟುಕೊಂಡು ಬಂದಿತ್ತು. ಸಕ್ಕರೆಯ ಹರಳುಗಳು ಒಂದು ಗುತ್ತಿಯ ಹತ್ತಿರ ನಿಂತು ಹೋಗಿದ್ದವು.

ಸಾಲಾಗಿ ಮರವನ್ನು ಏರುತ್ತಿದ್ದ ಇರುವೆಗಳು ಅವನ ಕಣ್ಣಿಗೆ ಬಿದ್ದವು. ಸಕ್ಕರೆಗಾಗಿ ಹೋಗುತ್ತಿದ್ದ ಇರುವೆಗಳು ಕಳ್ಳನ ಬಗ್ಗೆ ಸುಳಿವು ನೀಡಿ ಅವನು ದಸ್ತಗಿರಿ ಆಗುವಂತೆ ಸಹಾಯ ಮಾಡಿದವು.

### ೧೩.ಸ್ಕೌಟಿಂಗ್ ಅಮೆರಿಕೆಗೆ ಬಂದ ಕಥೆ

ಅನಾಮಧೇಯ ಸ್ಕೌಟ್ ಬಾಲಕನೊಬ್ಬನ ಒಂದು ಚಿಕ್ಕ ಸಮಯೊಚಿತ ಸಹಾಯ ಸ್ಕೌಟಿಂಗ್ ಅಮೆರಿಕಾ ಪ್ರವೇಶಿಸಲು ಕಾರಣವಾಯಿತು.

೧೯೧೦ ಲಂಡನ್ ನಗರ, ದಟ್ಟವಾಗಿ ಆವರಿಸಿದ್ದ ಮಂಜು. ಕೆಲವೇ ಗಜಗಳ ದೂರವು ಕಾಣಿಸದ ಮಂಜು. ಲಂಡನ್ನಿನ ಸಿಟಿ ಬಸ್ಸುಗಳು ಮಂಜಿನ ದೀಪವನ್ನು ಉರಿಸಿಕೊಂಡು ನಿಧಾನವಾಗಿ ಚಲಿಸುತ್ತಿದ್ದವು. ಬೀದಿ ದೀಪಗಳನ್ನು ಮಧ್ಯಾಹ್ನವೇ ಹೊತ್ತಿಸಿದ್ದಾಗ್ಯೂ ಅವುಗಳ ಬೆಳಕು ಅಲ್ಲಲ್ಲಿ ಮಿಣುಕು ಮಿಣುಕಾಗಿ ಕಾಣುತ್ತಿತ್ತು.

ವ್ಯವಹಾರದ ನಿಮಿತ್ತ ಲಂಡನ್ನಿಗೆ ಬಂದಿದ್ದ ಅಮೆರಿಕೆಯ ಶಿಕಾಗೋ ನಗರದ ವಿರುದ್ಧ ಪತ್ರಿಕೆ ಪ್ರಕಾಶಕ, ಶ್ರೀಮಂತ ೫೧ವರ್ಷ ವಯಸ್ಸಿನ ವಿಲಿಯಂ ಬಾಯ್ಸ್ ಈ ಪ್ರತಿಕೂಲ ಹವಾಮಾನದಲ್ಲಿ ನಿಧಾನವಾಗಿ ನಡೆದುದ್ದನ್ನು ಒಂದು ದೀಪದ ಕಂಬದ ಕೆಳಗೆ ನಿಂತು ತಾನು ಹೋಗಲೇಬೇಕಾದ ದಾರಿಯ ಅರಿವಿಲ್ಲದೆ ಅನುಮಾನಿಸುತ್ತಾ ನಿಂತನು. ತಾನು ದಾರಿತಪ್ಪಿದ್ದೇನೆಂದು ಅರಿವಾಗಿ ಪೇಚಾಡುತ್ತಿದ್ದನು.

ಇದೇ ಸಮಯಕ್ಕೆ ಒಬ್ಬ ಬಾಲಕ ಆ ದಾರಿಯ ಮೂಲಕ ಹಾದುಹೋದ. ಸ್ವಲ್ಪ ದೂರ ಹೋದವನು ಹಿಂತಿರುಗಿ ಬಂದ ''ನನ್ನಿಂದೇನಾದರೂ ಸಹಾಯವಾಗಬೇಕೇ? ಎಂದು ಆ ಆಗುಂತಕನನ್ನು ಕೇಳಿದನು. ಖಂಡಿತವಾಗಿಯೂ ನಾನು ನನ್ನ ವ್ಯವಹಾರಕ್ಕಾಗಿ ಈ ವಿಳಾಸವನ್ನು ತಲುಪಬೇಕಾಗಿತ್ತು ಎಂದ. ಬಾಯ್ ಆ ವಿಳಾಸದ ಗುರುತನ್ನು ಹೇಳಿದನು." ಬಾಯ್‌ನ ಉಚ್ಚಾರಣೆಯಿಂದ ಅವನು ಅಮೆರಿಕನ್ನನೆಂದು ಬಾಲಕನು ಗ್ರಹಿಸಿದನು. ''ಚಿಂತಿಸಬೇಡಿ ನಾನು ನಿಮ್ಮನ್ನು ಈ ವಿಳಾಸಕ್ಕೆ ತಲುಪಿಸುತ್ತೇನೆ.'' ಎಂದು ಬಾಲಕನು ಆಗುಂತಕನನ್ನ ಅವನು ಹೋಗಬೇಕಾಗಿದ್ದ ಸ್ಥಳಕ್ಕೆ ತಲುಪಿಸಿದನು. ಅಮೆರಿಕನ್ನನು ಜೇಬಿನಿಂದ ಒಂದು ಶಿಲ್ಲಿಂಗ್ ತೆಗೆದು ಬಾಲಕನಿಗೆ ನೀಡಲು ಹೋದಾಗ ಅವನು ಸರ್, ನೀವು ನನಗೆ ಒಂದು ಒಳ್ಳೆಯ ಕೆಲಸವನ್ನು ಮಾಡಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಧನ್ಯವಾದಗಳು. ''ಎಂದು ಹಣವನ್ನು ನಿರಾಕರಿಸಿದನು''. ''ಕಾರಣವೇನು?'' ಎನ್ನುವ ಪ್ರಶ್ನೆಗೆ ''ನಾನು ಒಬ್ಬ ಸ್ಕೌಟ್?'' ಎಂದು ಉತ್ತರಿಸಿದ. ''ಸ್ಕೌಟ್?'' ಹಾಗೆಂದರೇನು ? ಕೇಳಿದ ಬಾಯ್.

''ನೀವು ಬೇಡನ್ ಪೊವೆಲ್‌ರವರ ಹೆಸರನ್ನು ಕೇಳಿಲ್ಲವೇ?'' ಎಂದು ಪ್ರಶ್ನಿಸಿದ ಬಾಲಕ. ಇದರ ಬಗ್ಗೆ ಹೆಚ್ಚು ವಿವರವನ್ನು ಬಯಸಿದ ಬಾಯ್‌ಗೆ ಸ್ಕೌಟ್ ಆಗಿ ಪಡೆಯುತ್ತಿರುವ ಸಂತೋಷದ ಅನುಭವವನ್ನು ವಿವರಿಸಿದ. ಬಾಯ್‌ಗೆ ಇದರ ಬಗ್ಗೆ ಇನ್ನೂ ಹೆಚ್ಚು ತಿಳಿದುಕೊಳ್ಳಬೇಕೆಂಬ ಆಸಕ್ತಿ ಉಂಟಾಯಿತು. ಆಗ ಬಾಲಕನು ''ನೀವು ಬೇಕಾದರೆ ನಮ್ಮ ಮುಖ್ಯ ಕಛೇರಿಯಲ್ಲಿ ಜನರಲ್ ಅವರನ್ನು ಭೇಟಿಯಾಗಿ ಅವರಿಂದ ಹೆಚ್ಚಿನ ವಿವರಗಳನ್ನು ಪಡೆಯಬಹುದು ಎಂದ''. ''ಜನರಲ್ ಎಂದರೆ ಯಾರು''? ಬಾಯ್ ಪ್ರಶ್ನೆ.

''ಬೇಡನ್‌ಪೊವೆಲ್ ಅವರು'' ಎಂದ ಬಾಲಕ. ಒಳ್ಳೆಯದು, ನಾನು ನನ್ನ ಕೆಲಸವನ್ನು ಮುಗಿಸಿಕೊಳ್ಳುತ್ತೇನೆ. ನಿನಗೆ ಸಮಯವಿದ್ದರೆ ನಿಮ್ಮ ಮುಖ್ಯ ಕಛೇರಿಗೆ ಕರೆದುಕೊಂಡು ಹೋಗು ಎಂದನು. ಬಾಯ್ ಬಾಲಕನು ಕಾದು ಕುಳಿತನು. ಆತನು ಕೆಲಸ ಮುಗಿಸಿಕೊಂಡು ಬಂದ ಮೇಲೆ ಸ್ಕೌಟ್ ಕಛೇರಿಗೆ ಕರೆದೊಯ್ದನು.

ಆತನನ್ನು ಅಲ್ಲಿ ಬಿಟ್ಟ ಬಾಲಕನು ಬಾಯ್‌ನನ್ನು ತನ್ನ ಹೆಸರನ್ನು ವಿಚಾರಿಸುವುದರೊಳಗಾಗಿ ಅದೃಶ್ಯನಾದನು. ವಿಲಿಯಂ ದಿ. ಬಾಯ್‌ನು ಕಛೇರಿಯಲ್ಲಿ ಸ್ಕೌಟ್ಸ್ ಸಂಸ್ಥಾಪಕ, ಮಿಲಿಟರಿ ವೀರ ಲೆಫ್ಟಿನೆಂಟ್ ಜನರಲ್, ರಾಬರ್ಟ್ ಸ್ಟಿಫನ್‌ಸನ್ ಸ್ಮಿತ್ ಬೇಡನ್ ಪೊವೆಲ್‌ನನ್ನು ಸಂಧಿಸಿ ಸ್ಕೌಟಿಂಗ್ ಬಗ್ಗೆ ಸಾಹಿತ್ಯ, ಸಮವಸ್ತ್ರ ಲಾಂಛನ ಮತ್ತಿತರ ವಸ್ತುಗಳನ್ನು ತನ್ನ ತಾಯ್ನಾಡಿಗೆ ಒಯ್ದನು. ಅಲ್ಲಿ ತನ್ನ ಸ್ನೇಹಿತ ವಾಷಿಂಗ್‌ಟನ್ ನಗರದ ಕೋಲೀನ್ ಲಿವಿಂಗ್‌ಸ್ಟನ್ ಮತ್ತಿತರ ಸ್ನೇಹಿತರೊಂದಿಗೆ .ದೀರ್ಘಾಂಗ್ ಸಮಾಲೋಚನೆಯ ನಂತರ ೧೯೧೦ನೆಯ ಫೆಬ್ರವರಿ ಎರಡು ''ಬಾಯ್ಸ್ ಸ್ಕೌಟ್ಸ್ ಆಫ್ ಅಮೆರಿಕಾ'' ಸಂಸ್ಥೆಯನ್ನು ಸ್ಥಾಪಿಸಿದನು.

ಈ ರೀತಿ ಒಬ್ಬ ಅನಾಮಧೇಯ ಸ್ಕೌಟ್ ಬಾಲಕನು ಅಪರಿಚಿತನೊಬ್ಬನಿಗೆ ಮಾಡಿದ ಒಂದು ಸಣ್ಣ ಸಹಾಯ, ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಸ್ಕೌಟಿಂಗ್ ಚಳವಳಿಗೆ ನಾಂದಿಯಾಯಿತು.

ನಂತರ ೧೭ ವರ್ಷಗಳ ತರುವಾಯ ಈ ಅನಾಮಧೇಯ ಬಾಲಕನಿಗೆ ಸ್ಕೌಟಿಂಗ್‌ನ ಅತ್ಯುನ್ನತ ಪುರಸ್ಕಾರವಾದ ''ರಜತ ಮಹಿಷ'' ವನ್ನು ನೀಡಿ ಸನ್ಮಾನಿಸಲಾಯಿತು. ಆದರೆ ಆ ಬಾಲಕನು ಈ ಪುರಸ್ಕಾರ ಸ್ವೀಕರಿಸಲು ಬರಲಿಲ್ಲ.

ಅಮೆರಿಕನ್ ಮಹಿಷರ ದೊಡ್ಡದೊಂದು ಕಂಚಿನ ಪ್ರತಿಮೆಯನ್ನು ಲಂಡನ್ನಿನ ಸಮೀಪದ ಸ್ಕೌಟ್ ಅಂತರರಾಷ್ಟ್ರೀಯ ತರಬೇತಿ ಕೇಂದ್ರದಲ್ಲಿ ಸ್ಥಾಪಿಸಲಾಗಿದೆ. ಇಂದು ಕೂಡಾ ಸ್ಕೌಟಿಂಗ್ ಚಳವಳಿಯಲ್ಲಿ ಅಸಾಧಾರಣ ಸೇವೆಸಲ್ಲಿಸಿದವರಿಗೆ ಇದರ ಚಿಕ್ಕ ಪ್ರತಿಮೆಯನ್ನು ನೀಡಲಾಗುತ್ತದೆ.

ಈ ವಿಗ್ರಹದ ಅನಾವರಣ ಸಮಾರಂಭದಲ್ಲಿ ಆ ಬಾಲಕನಿರಲಿಲ್ಲ. ಅವನಾರೆಂದು ಗೊತ್ತಾಗಲೇಇಲ್ಲ. ಅವನ ಪರವಾಗಿ ವೇಲ್ಸ್ ರಾಜಕುಮಾರ, ಅಮೆರಿಕನ್ ರಾಯಬಾರಿ ಆಲೆನ್ಸನೇ ಹ್ಯೂಟನ್‌ರಿಂದ ಈ ಪುರಸ್ಕಾರವನ್ನು ಸ್ವೀಕರಿಸಿದರು.

ಆ ವಿಗ್ರಹದ ಕೆಳಗಿರುವ ಫಲಕದಲ್ಲಿ ''ತನ್ನ ನಿತ್ಯದ ಸತ್ಕಾರ್ಯವನ್ನು ನಿಸ್ಪೃಹತೆಯಿಂದ ಮಾಡುವುದರ ಮೂಲಕ ಅಮೆರಿಕಾಗೆ ಸ್ಕೌಟಿಂಗ್ ತಂದು ಕೊಟ್ಟು ಅನಾಮಧೇಯ ಬಾಲಕನಿಗೆ ಕೊಡುಗೆ.'' ಎಂದಿದೆ. ಈ ಮಾತು ಎಷ್ಟು ಅರ್ಥಪೂರ್ಣ!



# ಹಲಗಪ್ಪ - ಒಂದು ಸ್ಮರಣೆ

ಎಂ. ಎಸ್. ಷಡಕ್ಷರಿ

ಸ್ಕೌಟ್ ವಲಯದಲ್ಲಿ ಚಿಕ್ಕಮಗಳೂರು ಎಂದ ಕೂಡಲೇ ಹಲಗಪ್ಪನವರನ್ನು ವಿಚಾರಿಸುವವರೇ ಎಲ್ಲಾ.

ಚಿಕ್ಕಮಗಳೂರು ಜಿಲ್ಲೆಯ ಸ್ಕೌಟ್ ಮತ್ತು ಗೈಡ್ ಚಳುವಳಿಯ ಇರುವಿಕೆಗೆ ಮತ್ತು ಬೆಳೆವಣಿಗೆಗೆ ಹಲಗಪ್ಪನವರಷ್ಟು ಶ್ರಮಿಸಿದವರು ಮತ್ತೊಬ್ಬರಿಲ್ಲ.

ಶಿಸ್ತಿನ ಸಿಪಾಯಿಯಾಗಿ ತಮ್ಮ ಸುತ್ತಲಿದ್ದವರಲ್ಲೆಲ್ಲಾ ಆ ಶಿಸ್ತನ್ನು ಮೂಡಿಸುತ್ತಿದ್ದರು. ಮಾಡುವ ಕೆಲಸದಲ್ಲೆಲ್ಲಾ ಅಚ್ಚು-ಕಟ್ಟು, ಅತೀ ಸಣ್ಣ ವಿಷಯಗಳಿಗೆ ಅವರು ಕೊಡುತ್ತಿದ್ದ ಮಹತ್ವ ಅನುಕರಣೀಯ. ಯಾವುದೇ ವಿಷಯದಲ್ಲಿ ಕಳಪೆ ಪ್ರಯತ್ನವನ್ನು ಅವರು ಒಪ್ಪುತ್ತಿರಲಿಲ್ಲ.

ಸುಮಾರು ೩೦ ವರ್ಷಗಳ ಅವಿರತ ಸೇವೆಯಿಂದ ವಯಸ್ಕರ ಶಿಕ್ಷಣ ಇಲಾಖೆಯ ಅಧಿಕಾರಿಯಾಗಿದ್ದರೂ ಕೂಡಾ ಅವರನ್ನು ಎಲ್ಲರೂ ಗುರುತಿಸುತ್ತಿದ್ದುದ್ದು ಸ್ಕೌಟ್ ಹಲಗಪ್ಪ ಎಂದು.

ರಾಜ್ಯದ ಮೊದಲನೆಯ ಮಹಾರಾಜ ಸ್ಕೌಟ್ ಆಗಿ, ಪ್ರಥಮ ವುಡ್ಸಾ ಬಾಡ್ಸ್ ಹೋಲ್ಡರ್ ಆಗಿ, ಮೊದಲನೆಯ ಲೀಡರ್ ಟ್ರೇನರ್ ಆಗಿ, ಪ್ರಪಥಮ ಜಿಲ್ಲಾ ತರಬೇತಿ ಆಯುಕ್ತರಾಗಿ, ಅವರು ಜಿಲ್ಲೆಯ ಸ್ಕೌಟಿಗೆ ಕೊಟ್ಟಿರುವ ಕೊಡುಗೆ ಅಪಾರ. ರಾಷ್ಟ್ರೀಯ ಪ್ರಶಸ್ತಿ ಸಿಲ್ವರ್ ಸ್ಟಾರ್ ಗಳಿಸಿದ ಹೆಗ್ಗಳಿಕೆ ಅವರದು. ಜಿಲ್ಲೆಯ ಸ್ಕೌಟಿಂಗ್ ಭೀಷ್ಮ ಎಂದರೆ ಅತಿಶಯೋಕ್ತಿಯಾಗಲಾರದು.

ತರಬೇತುದಾರರಾಗಿ ಅವರು ಸಾವಿರಾರು ಸ್ಕೌಟ್ ಶಿಕ್ಷಕರನ್ನು ರಾಜ್ಯದಾದ್ಯಂತ ತಯಾರು ಮಾಡಿದ್ದಾರೆ. ಅಷ್ಟೇಅಲ್ಲ ಅವರೆಲ್ಲರಲ್ಲಿ ಸ್ಕೌಟಿಂಗ್ ಬಗ್ಗೆ ಅಚಲ ವಿಶ್ವಾಸ ಮೂಡುವಂತೆ ಮಾಡುವುದರಲ್ಲಿ ಅವರೇ ಒಂದು ಉದಾಹರಣೆಯಾಗಿ ನಮ್ಮೆದುರಿಗೆ ನಿಲ್ಲುತ್ತಾರೆ.

ಅವರು ನಾಯಕರಾದ ತರಬೇತಿ ಶಿಬಿರಗಳಲ್ಲಿ ಶಿಸ್ತು, ಸಮಯ ಬದ್ಧತೆ ಮತ್ತು ಶಿಸ್ತಿಗೆ ಆದ್ಯತೆಯಿರುತ್ತಿತ್ತು. ಅವರ ಜೊತೆ ಸುಮಾರು ತರಬೇತಿ ಶಿಬಿರಗಳಲ್ಲಿ ಸಹಾಯಕನಾಗಿ ಕೆಲಸ ಮಾಡಿರುವ ನನಗೆ ಅವರ ಕರ್ತವ್ಯ ಪ್ರಜ್ಞೆ ಅಚ್ಚಳಿಯದಂತೆ ಛಾಪಿಸಿದೆ. ನಿರ್ವಾಣಸ್ವಾಮಿ ಮಠದಲ್ಲಿ ನಡೆದ ಒಂದು ತರಬೇತಿಯಲ್ಲಿ ಯಾರೋ ಒಬ್ಬ ಶಿಕ್ಷಕ ಅಶಿಸ್ತಿನಿಂದ ನಡೆದು ಕೊಂಡನೆಂದು ಕೂಡಲೇ ಅವನನ್ನು ಬಿಡುಗಡೆ ಮಾಡಿ ಅವನ ಮುಖ್ಯೋಪಾಧ್ಯಾಯರಿಗೆ ಅವನ ಬಗ್ಗೆ ಕ್ರಮ ತೆಗೆದು ಕೊಳ್ಳಲು ಶಿಫಾರಸನ್ನು ಕೂಡಾ ಮಾಡಿದ್ದರು. ಯಾರಿಗೂ ಹೆದರದೆ ರಾಜೀಮಾಡಿ ಕೊಳ್ಳದೆ ತಾನು ಹಿಡಿದದ್ದನ್ನು ತನಗೆ ತೃಪ್ತಿಯಾಗುವಂತೆ ಮಾಡುವ ಛಲ ಅವರಲ್ಲಿತ್ತು.

ಚಿಕ್ಕಮಗಳೂರಿನಲ್ಲಷ್ಟೇ ಅಲ್ಲ ಇಡೀ ಕರ್ನಾಟಕದಲ್ಲಿ ಬಹುಶಃ ಅವರು ಸ್ಕೌಟ್ ಶಿಕ್ಷಕರ ತರಬೇತಿ ಕೊಡದೆ ಇರುವ ಸ್ಥಳವೇ ಇಲ್ಲ. ಅವರು ಯಾವಾಗಲೂ ಹೇಳುತ್ತಿದ್ದರು. ಸಮವಸ್ತ್ರ ಮತ್ತಿತರ ಅವಶ್ಯಕ ವಸ್ತುಗಳಿರುವ ಒಂದು ಸೂಟ್‌ಕೇಸ್ ಯಾವಾಗಲೂ ರೆಡಿ ಇರುತ್ತದೆ ಎಂದು. ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಗೆ ನಗರದ ಅತೀ ಸೂಕ್ತವಾದ ಸ್ಥಳದಲ್ಲಿ ಒಂದು ನಿವೇಶನವನ್ನು ಮಂಜೂರು ಮಾಡಿಸಲು ಅವರ ಅವಿರತ ಪ್ರಯತ್ನವೇ ಕಾರಣ. ಈ ನಿವೇಶನದ ಮತ್ತು ದೇವರಹಳ್ಳಿ ಹಾಗೂ ಮತ್ತಾವರದ ಕ್ಯಾಂಪ್ ಸೈಟ್‌ಗಳ ಕಡತಗಳನ್ನು ಹಿಡಿದುಕೊಂಡು ಅವರು ಒಡಾಡುತ್ತಿದ್ದ ನೆನಪು ನನಗೆ ಇನ್ನೂ ಹಸಿರಾಗಿದೆ.

ಸ್ಕೌಟ್ ಚಳುವಳಿಗೆ ಅತಿ ಪ್ರಶಸ್ತವಾದ ಜಿಲ್ಲಾ ಮೈದಾನದಲ್ಲಿ ಒಂದು ಜಾಗ ತಮ್ಮದಾಗಿಸಿ ಕೊಂಡದ್ದು ಅವರ ದೂರ ದೃಷ್ಟಿಯ ದ್ಯೋತಕ. ಆ ಜಾಗದಲ್ಲಿ ಒಂದು ಕಟ್ಟಡವನ್ನು ಕಟ್ಟಲು, ಅಂದಿನ ಆಯುಕ್ತರಾದ ಕೆ. ಆರ್. ಭರತ್‌ರವರೊಡಗೂಡಿ ಸ್ವಂತ ಉಸ್ತುವಾರಿಯಲ್ಲಿ ಒಂದು ಭವ್ಯ ಕಟ್ಟಡವನ್ನು ಕಟ್ಟಿದ ಹಿರಿಮೆ ಹೆಚ್ಚಾಗಿ ಅವರಿಗೆ ಸೇರಬೇಕು.

ಅವರ ಮನೆಯು ಸ್ಕೌಟ್ ಸಂಸ್ಥೆಯಿಂದ ಜಿಲ್ಲೆಗೆ ಬಂದ ಎಲ್ಲರಿಗೂ ಒಂದು ಗೆಸ್ಟ್ ಹೌಸ್ ಆಗಿತ್ತು. ರಾಜ್ಯ ಮಟ್ಟದ ಅಧಿಕಾರಿಗಳು ಯಾರು ಬಂದರೂ ಸಂತೆಯ ಹತ್ತಿರವೇ ಇಳಿದು ಸೀದಾ ಗೇಟ್ ಮೇಲೆ ಸ್ಕೌಟ್ ಲಾಂಛನವಿರುವ ರೇಣುಕ ನಿಲಯಕ್ಕೆ ಹೋಗುತ್ತಿದ್ದರು. ಅವರ ಮನೆಯ ಅತಿಥಿ ಸತ್ಕಾರ ಸಾಟಿಯಿಲ್ಲದ್ದು. ಇದೇ ರಾಜ್ಯದಲ್ಲಿ ಒಬ್ಬ ಉತ್ಕೃಷ್ಟ ತರಬೇತು ದಾರನಾಗಿ ಅವರನ್ನು ಗುರುತಿಸಲಾಗುತ್ತಿತ್ತು. ಪಯನೀರಿಂಗ್‌ನಲ್ಲಿಯಂತೂ ಅವರಿಗೆ ಸರಿಸಮಾನರಾದವರು ಕರ್ನಾಟಕ ರಾಜ್ಯದಲ್ಲಿ ಮತ್ತೊಬ್ಬರಿರಲಿಲ್ಲ.

ಹಾಸ್ಯ ಪ್ರಜ್ಞೆ (ಮುಂಗೋಪಿಯಾದರೂ ಕೂಡ) ಅವರನ್ನು ಒಬ್ಬ ಸ್ನೇಹಮಯಿಯಾಗಿ ಮಾಡಿತ್ತು. ಸ್ಕೌಟಿಂಗ್‌ಗೆ ಸಂಬಂಧ ಪಟ್ಟ ಯಾವುದೇ ವಿಷಯದ ಬಗ್ಗೆ ತಯಾರಿಯಿಲ್ಲದೆ ನಿಖರವಾಗಿ ಮಾತನಾಡ ಬಲ್ಲಷ್ಟು ಪ್ರಭುದ್ದತೆ ಅವರಲ್ಲಿತ್ತು.

# ಮಕ್ಕಳ ಕರ್ತವ್ಯ ಮತ್ತು ಜವಾಬ್ದಾರಿಗಳು

ಪ್ರೊ. ಎಂ. ಸಿ. ಮೂರ್ತಿ

ನಮ್ಮ ಸಮಾಜ ಮಕ್ಕಳಿಗೆ ವಿಶಿಷ್ಟವಾದ ಸ್ಥಾನವನ್ನು ನೀಡಿದೆ. ಹಿರಿಯರಿಗೆ ಮಕ್ಕಳು ದೇವರಸಮಾನ. ಕಾರಣ, ಮಕ್ಕಳ ಹೃದಯ ನಿಷ್ಕಲ್ಮಶತೆ, ನಿಷ್ಕಪಟತೆ, ಮುಗ್ಧ ಮತ್ತು ಸ್ವಚ್ಛಂದ ಭಾವನೆಗಳಿಂದ ಕೂಡಿರುತ್ತದೆ. ಇಂತಹ ಮಕ್ಕಳಿಗೆ ಸಮಾಜದಲ್ಲಿ ಸರಿಯಾದ ಸನ್ನಿವೇಶ ಕಲ್ಪಿಸಿ, ಉತ್ತಮ ಮಾರ್ಗದರ್ಶನ ಮಾಡಬೇಕಾಗಿರುವುದು ಪ್ರತಿಯೊಬ್ಬ ಹಿರಿಯರ ಕರ್ತವ್ಯವಾಗಿದೆ. ಕಾರಣ, ''ಇಂದಿನ ಮಕ್ಕಳೇ ನಾಳಿನ ಪ್ರಜೆಗಳು''. 'ಬಿತ್ತಿದಂತೆ ಬೆಳೆ' ಎಂಬ ನಾಣ್ನುಡಿ ಕೂಡ ಇದೆ. ಇಂದು ಸಮಾಜದಲ್ಲಿ ಮೌಲ್ಯಗಳು ವಾಸ್ತವಿಕತೆಯಿಂದ ದೂರವಾಗಿವೆ. ಈ ನಾಡಿನ ಭಾವೀಪ್ರಜೆಗಳ ಜೀವನ ಅಂಧಕಾರಮಯವಾಗಿ ಪರಿಣಮಿಸುತ್ತಿದೆ. ಅವರನ್ನು ಈ ಅಂಧಕಾರದಿಂದ ಬೆಳಕಿನೆಡೆಗೆ ಕೊಂಡೊಯ್ಯುವ ಮಹತ್ವಪೂರ್ಣ ಕಾರ್ಯ ಮಾಡಬೇಕಾಗಿದೆ. ಇಂತಹ ಗುರಿ ಉದ್ದೇಶಗಳನ್ನು ಹೊಂದಿ ಲಾರ್ಡ್ ಬೇಡನ್‌ಪೊವೆಲ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ಪ್ರಾರಂಭಿಸುವ ಮೂಲಕ ಇಡೀ ವಿಶ್ವದಲ್ಲಿ ಚಿರಸ್ಮರಣೀಯರಾಗಿದ್ದಾರೆ.

'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬಂತೆ ಎಳವೆಯಲ್ಲಿಯೇ ಮಕ್ಕಳಿಗೆ ಅವರ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ತಿಳಿಸುವ ಕಾರ್ಯವನ್ನು ಸ್ಕೌಟ್ಸ್ ಸಂಸ್ಥೆಯು ಮಾಡುತ್ತಾ ಬಂದಿದೆ. 'ಗಿಡವಾಗಿ ಬಗ್ಗದ್ದು, ಮರವಾಗಿ ಬಗ್ಗೀತೇ' ಎಂಬಂತೆ, ಕಿರಿಯ ವಯಸ್ಸಿನಲ್ಲಿಯೇ ಮಕ್ಕಳಿಗೆ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಸ್ಪಷ್ಟ ಮತ್ತು ನಿರ್ದಿಷ್ಟ ತಿಳುವಳಿಕೆಯನ್ನು ಬೆಳೆಸಬೇಕಾಗಿದೆ.

ಇಂದಿನ ಯುವಜನಾಂಗ ಕೇವಲ ಹಕ್ಕುಗಳಿಗಾಗಿ ಹೋರಾಡುವ ಮನೋಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಿದೆ. ಹಕ್ಕು ಮತ್ತು ಕರ್ತವ್ಯಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಎಂಬ ಸ್ಪಷ್ಟ ಕಲ್ಪನೆಗಳನ್ನು ಮಕ್ಕಳಲ್ಲಿ ಬೆಳೆಸಬೇಕು. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಶಾಂತಿ ಮತ್ತು ನೆಮ್ಮದಿಯಿಂದ ಬದುಕಲು ತನ್ನ ಪಾಲಿನ ಕರ್ತವ್ಯಗಳನ್ನು ಶ್ರದ್ಧೆ ಮತ್ತು ನಿಷ್ಠೆಯಿಂದ ಮಾಡಬೇಕೆಂಬ ಜ್ಞಾನವನ್ನು ಮೂಡಿಸಬೇಕು. ಆ ಮೂಲಕ ಭವಿಷ್ಯದ ಸತ್ಪ್ರಜೆಗಳನ್ನು ರೂಪಿಸಬೇಕಾಗಿದೆ. 'ಆರೋಗ್ಯವಂಥ ಸತ್ಪ್ರಜೆಗಳು ದೇಶದ ಆಸ್ತಿ' ಎಂದು ಮಹಾತ್ಮಗಾಂಧೀಜಿಯವರು ಹೇಳಿದ ಮಾತನ್ನು ಇಂದು ಸ್ಮರಿಸಿಕೊಳ್ಳುತ್ತಾ, ಯೋಧರಂತೆ ಕಾರ್ಯಪ್ರವೃತ್ತರಾಗಬೇಕಾಗಿದೆ. ಆ ಮೂಲಕ ಸಮಾಜದ ಋಣ ತೀರಿಸಬೇಕಾಗಿದೆ.

ಪ್ರಸ್ತುತ ಮಕ್ಕಳಲ್ಲಿ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಬೆಳೆಸುವ ಕಾರ್ಯ, ವೈಯಕ್ತಿಕವಾಗಿ ಭವಿಷ್ಯದ ದೃಷ್ಟಿಯಿಂದ ಕಳಸಪ್ರಾಯವಾಗಿದೆ.

ಪ್ರಸ್ತುತ ಸಮಾಜದ ಪ್ರತಿಯೊಂದು ಮಗು ನಮ್ಮ ಸಮಾಜದ ಸಂವಿಧಾನವನ್ನು ಅನುವರ್ತಿಸಬೇಕು. ಅದರ ಆದರ್ಶಗಳನ್ನು, ರಾಷ್ಟ್ರಲಾಂಛನಗಳನ್ನು ಗೌರವಿಸಬೇಕು. ಅಂದರೆ ನಮ್ಮ ಸಂವಿಧಾನದ ನೀತಿ-ನಿಯಮ, ಆದರ್ಶಗಳನ್ನು ಪ್ರಾಮಾಣಿಕತೆಯಿಂದ ಪಾಲಿಸಬೇಕು. ಹಾಗೆಯೇ ರಾಷ್ಟ್ರಲಾಂಛನಗಳು ದೇಶದ ಏಕತೆಯ ಸಂಕೇತವಾಗಿದೆ ಎಂಬುದನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಡಬೇಕಾಗಿದೆ.

ನಮ್ಮ ಮಕ್ಕಳಿಗೆ ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸ್ಫೂರ್ತಿದಾಯಕವಾದಂತಹ ಉದಾತ್ತ ಆದರ್ಶಗಳನ್ನು ಪೋಷಿಸುವಂತೆ ಮತ್ತು ಅನುಸರಿಸುವಂತೆ ತಿಳಿಸಬೇಕು. ''ಗತಕಾಲವನ್ನು ಮರೆತ ದೇಶಕ್ಕೆ ಭವಿಷ್ಯವಿಲ್ಲ'' ಎಂಬ ಮಾತಿನ ಸತ್ಯವನ್ನರಿಯಬೇಕು. ಈ ಹಿನ್ನೆಲೆಯಲ್ಲಿ ಈ ಅಂಶಗಳಲ್ಲಿರುವ ಉದಾತ್ತ ಆದರ್ಶಗಳನ್ನು ಮಕ್ಕಳು ಅರಿತು ಪೋಷಿಸುವುದು ಮತ್ತು ಅನುಸರಿಸುವುದು ಕರ್ತವ್ಯ ಎಂದು ತಿಳಿಸಬೇಕು.

ಮಕ್ಕಳು ದೇಶದ ಸಾರ್ವಭೌಮತ್ವವನ್ನು, ಐಕ್ಯತೆಯನ್ನು ಮತ್ತು ಅಖಂಡತೆಯನ್ನು ಎತ್ತಿ ಹಿಡಿಯಬೇಕು ಹಾಗೂ ಸಂರಕ್ಷಿಸಬೇಕು.

ದೇಶದ ಸಾರ್ವಭೌಮತ್ವ ಅತ್ಯಂತ ಪ್ರಮುಖ ಅಂಶ. ಇಂದು ನಾವು ಸರ್ವತಂತ್ರ ಸ್ವತಂತ್ರರಾಷ್ಟ್ರವನ್ನು ರೂಪಿಸಿಕೊಂಡಿರುವುದರಿಂದ, ಯಾರ ಅಧೀನವು ಅಲ್ಲವೆಂಬ ಅಂಶವನ್ನು ಮಕ್ಕಳಿಗೆ ತಿಳಿಸಬೇಕು.

ಭಾರತ ವಿಶಾಲ ಬೃಹತ್ ರಾಷ್ಟ್ರ. ಇಲ್ಲಿ ಭಿನ್ನ, ಭಾಷೆ, ಜಾತಿ, ಜನಾಂಗ, ಧರ್ಮ ಮತ್ತು ಪ್ರಾಂತೀಯ ಜನತೆಯನ್ನು ಕಾಣಬಹುದಾಗಿದೆ. ಇವರ ಆಹಾರ, ಉಡುಗೆ - ತೊಡುಗೆಗಳಲ್ಲಿಯೂ ಭಿನ್ನತೆ ಕಾಣುತ್ತಿದ್ದೇವೆ. ಇಷ್ಟೆಲ್ಲಾ ವೈವಿಧ್ಯತೆಗಳ ಮಧ್ಯೆಯೂ ನಾವೆಲ್ಲರೂ ಒಂದೇ ಎಂಬ ಏಕತೆಯ ಸೂತ್ರವನ್ನು ಇಲ್ಲಿಯ ಜನಜೀವನದಲ್ಲಿ ಕಾಣಬಹುದಾಗಿದೆ.

ಉದಾ : ಒಂದು ಹೂ ತೋಟದಲ್ಲಿ ವಿವಿಧ ಬಣ್ಣದ ಹೂಗಳಿದ್ದರು, ಆ ತೋಟ ಮತ್ತಷ್ಟು ಸುಂದರವಾಗಿರುವಂತೆ, ವಿವಿಧ ಹೂಗಳಿಂದ ಕಟ್ಟಲ್ಪಟ್ಟ ಹೂವಾಲೆ ಮನಮೋಹಕವಾಗಿರುವಂತೆ ನಮ್ಮ ದೇಶದ ಐಕ್ಯತೆಯ ನಿರ್ದಿಷ್ಟ ಕಲ್ಪನೆಯನ್ನು ಮಕ್ಕಳು ಬೆಳೆಸಿಕೊಳ್ಳಬೇಕಾದ ಕರ್ತವ್ಯವನ್ನು ಅರಿಯಬೇಕೆಂಬ ಸತ್ಯವನ್ನು ಮಕ್ಕಳು ಮನಗಾಣಬೇಕಾಗಿದೆ. ಆ ಮೂಲಕ ದೇಶದ ಅಖಂಡತೆಯನ್ನು ಎತ್ತಿ ಹಿಡಿದು ದೇಶವನ್ನು ಶತ್ರುಗಳಿಂದ ಮತ್ತು ದೇಶದ್ರೋಹಿಗಳಿಂದ ಸಂರಕ್ಷಿಸಬೇಕೆಂಬ ಕರ್ತವ್ಯವನ್ನು ಮಕ್ಕಳು ಮನಗಾಣಬೇಕಾಗಿದೆ.

ಮಕ್ಕಳು ದೇಶ ರಕ್ಷಿಸಲು ಮತ್ತು ರಾಷ್ಟ್ರಕ್ಕೆ ಸೇವೆ ಸಲ್ಲಿಸಲು ಕರೆ ಬಂದಾಗ ಸದಾ ಸಿದ್ಧನಾಗಿರಬೇಕು. ''ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪೀ ಗರೀಯಸೀ'' ಎಂಬುದನ್ನು ಸ್ಮರಿಸಿಕೊಂಡು ಮಾತೃಭೂಮಿ, ಜನ್ಮ ನೀಡಿದ ತಾಯಿಯಷ್ಟೇ ಪವಿತ್ರಳು ಮತ್ತು ಶ್ರೇಷ್ಠಳು. ಪ್ರತಿಯೊಬ್ಬ ವಿದ್ಯಾರ್ಥಿ ತನ್ನ ಮಾತೃಭೂಮಿ ಅಂದರೆ, ದೇಶದ ಬಗ್ಗೆ ಪ್ರೀತಿ, ಒಲವುಗಳನ್ನು ಬೆಳೆಸಿಕೊಳ್ಳಬೇಕು. ತಾಯಿ ನವಮಾಸಗಳ ಕಾಲ ಮಗುವನ್ನು ಹೊತ್ತರೆ, ಭೂಮಿ ತಾಯಿ, ಆ ವ್ಯಕ್ತಿಯನ್ನು ಜೀವಮಾನವಿಡಿ ಸಲಹುತ್ತಾಳೆ. ಆದ್ದರಿಂದ ಮಕ್ಕಳು ಸದಾಕಾಲ ದೇಶರಕ್ಷಿಸಲು ಮತ್ತು ರಾಷ್ಟ್ರಕ್ಕೆ ಸೇವೆ ಸಲ್ಲಿಸಲು ಸಿದ್ಧರಾಗಿರಬೇಕು. ಈ ಹಿನ್ನೆಲೆಯಲ್ಲಿ ಝಾನ್ಸೀರಾಣಿ ಲಕ್ಷ್ಮೀಬಾಯಿ, ಕಿತ್ತೂರು ರಾಣಿ ಚನ್ನಮ್ಮ ಮತ್ತು ಟಿಪ್ಪು ಸುಲ್ತಾನರನ್ನು ನೆನೆಯಬೇಕು.

ಮಕ್ಕಳು ಧರ್ಮ, ಭಾಷೆ ಮತ್ತು ಪ್ರಾದೇಶಕತೆ ಅಥವಾ ಜಾತಿ-ಪಂಗಡಗಳ ಭಿನ್ನತೆಗಳಿಂದ ಅತೀತವಾಗಿ ಭಾರತದ ಎಲ್ಲಾ ಜನತೆಯಲ್ಲಿ ಸಾಮರಸ್ಯವನ್ನು ಹಾಗೂ ಸಮಾನ ಭ್ರಾತೃತ್ವದ ಭಾವನೆಯನ್ನು ಹೊಂದಿರಬೇಕು. ಸ್ತ್ರೀಯರ ಗೌರವಕ್ಕೆ ಕುಂದುಂಟು ಮಾಡುವ ಆಚರಣೆಗಳನ್ನು ಬಿಡುವುದರ ಮೂಲಕ ಮಕ್ಕಳಲ್ಲಿ ಸ್ತ್ರೀಯರ ಬಗ್ಗೆ ಗೌರವ ಭಾವನೆ ಮೂಡಿಸಬೇಕು.

ಮಕ್ಕಳು ನಮ್ಮ ಸಂಮಿಶ್ರ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಗೌರವಿಸಬೇಕು ಮತ್ತು ಕಾಪಾಡಬೇಕು. ಅನಾದಿ ಕಾಲದಿಂದಲೂ ಪರಕೀಯರು ನಮ್ಮ ಸಮಾಜ ಮತ್ತು ಸಂಸ್ಕೃತಿಯ ಮೇಲೆ ಪ್ರಭಾವವನ್ನು ಬೀರಿದ್ದಾರೆ. ನಮ್ಮ ಪೂರ್ವಜರು ಸಹ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದಿದ್ದಾರೆ. ಇಂದು ಇವೆರಡರಲ್ಲಿ ಇದ್ದ ಉತ್ತಮ ಭವ್ಯ ಸಂಮಿಶ್ರ ಸಂಸ್ಕೃತಿಯು ನಮ್ಮದಾಗಿದ್ದು ಇದನ್ನು ಗೌರವಿಸಬೇಕು. ಅಲ್ಲದೆ ನಮ್ಮೊಂದಿಗೆ ಇದು ನಾಶವಾಗದೆ ಮುಂದಿನ ಜನಾಂಗದವರಿಗೆ ಲಭ್ಯವಾಗುವಂತೆ ಕಾಪಾಡಬೇಕಾದ ಕರ್ತವ್ಯ ಮತ್ತು ಜವಾಬ್ದಾರಿಯನ್ನು ಮಕ್ಕಳು ಹೊಂದಬೇಕು.

ಮಕ್ಕಳು ಅರಣ್ಯ, ಸರೋವರಗಳು, ನದಿಗಳು ಮತ್ತು ಅರಣ್ಯಜೀವಿಗಳು ಸೇರಿದಂತೆ ನೈಸರ್ಗಿಕ ಪರಿಸರವನ್ನು ಸಂರಕ್ಷಿಸಬೇಕು ಹಾಗೂ ಉನ್ನತೀಕರಿಸಬೇಕು. ಹಾಗೆಯೇ ಪಶು, ಪಕ್ಷಿ ಮತ್ತು ಪ್ರಾಣಿಗಳಿಗೆ ಅನುಕಂಪ ತೋರಿಸಬೇಕು. ಇಂದು ಅರಣ್ಯ ನಾಶದಿಂದ ಜನತೆ, ಪ್ರಾಣಿ, ಪಕ್ಷಿಗಳು, ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸಬೇಕಾಗಿದೆ. ಆದುಧರಿಂದ ಪರಿಸರ ಸಂರಕ್ಷಿಸಿ, ಪ್ರಾಣಿ-ಪಕ್ಷಿಗಳ ಸಂರಕ್ಷಣೆಯ ಕರ್ತವ್ಯ ಮತ್ತು ಜವಾಬ್ದಾರಿ ಮಕ್ಕಳ ಮೇಲಿದೆ. ಅರಣ್ಯ ನಾಶದಿಂದ ಕಾಡನ್ನು ತೊರೆದು ಅನೇಕ ಪ್ರಾಣಿಗಳು ನಾಡಿಗೆ ಬಂದು ತೊಂದರೆಗೆ ಕಾರಣವಾಗಿದೆ. ಹಾಗೆಯೇ ಬಹುತೇಕ ಪಕ್ಷಿಗಳು ವಿನಾಶದ ಅಂಚಿಗೆ ಹೋಗಿದೆ.

ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವನೆ, ಮಾನವೀಯತೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸಬೇಕಾಗಿದೆ. ಇಂದು ನಾವು ವಿಜ್ಞಾನ ಮತ್ತು ತಾಂತ್ರಿಕ ಯುಗದಲ್ಲಿದ್ದೇವೆ. ಸಮಾಜ ಪ್ರತಿಕ್ಷಣದಲ್ಲಿಯೂ ಬದಲಾವಣೆ ಹೊಂದುತ್ತಿದೆ. ಮತ್ತು ಜ್ಞಾನದ ವೃದ್ಧಿಯಾಗುತ್ತದೆ. ಈ ಬದಲಾದ ಸಮಯ ಸನ್ನಿವೇಶಕ್ಕೆ ಮಕ್ಕಳು ಜ್ಞಾನವನ್ನು ವೃದ್ಧಿಗೊಳಿಸಿಕೊಂಡು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಮಾನವೀಯತೆ ಬೆಳೆಸಿಕೊಳ್ಳಬೇಕು. ಹಾಗೆಯೇ ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಮಕ್ಕಳು ಬೆಳೆಸಿಕೊಳ್ಳಬೇಕು. ಪ್ರತಿಯೊಂದು ಮಗುವು ಸಾರ್ವಜನಿಕ ಆಸ್ತಿಯನ್ನು ರಕ್ಷಿಸಬೇಕು. ಅಂದರೆ ಸಮಾಜದ ಆಸ್ತಿಯಾದ ಶಾಲೆ, ಆಸ್ಪತ್ರೆ, ಮಠ-ಮಂದಿರ, ರೈಲ್ವೆ ಮತ್ತು ಬಸ್ಸು ಮುಂತಾದವುಗಳಿಗೆ ಹಾನಿಯಾದಂತೆ ನೋಡಿಕೊಳ್ಳಬೇಕು. ಹಾಗೆಯೇ ಹಿಂಸೆಯನ್ನು ತ್ಯಜಿಸಬೇಕು. ಅಹಿಂಸೆ ಎಂಬ ಮಾತು ಬಂದಾಗ ಮಹಾತ್ಮಾಗಾಂಧೀಜಿಯವರನ್ನು ನೆನೆಯಬೇಕು. ಕಾರಣ ಅಹಿಂಸಾ ತತ್ವವನ್ನು ಅನುಸರಿಸಿ, ಜಗತ್ತಿನಲ್ಲಿ ಪ್ರಪ್ರಥಮ ಭಾರಿಗೆ ಸ್ವಾತಂತ್ರವನ್ನು ಗಳಿಸಿಕೊಟ್ಟ ಕೀರ್ತಿ ಅವರಿಗೆ ಸಲ್ಲುತ್ತದೆ. ಅಲ್ಲದೆ ಜಗತ್ತಿನ ಯಾವುದೇ ವ್ಯಕ್ತಿಗೆ ನೋವಾದರೂ ಗಾಂಧೀಜಿಅವರಿಗೆ ನೋವಾಗುತ್ತಿತ್ತಂತೆ. ಈ ಮೂಲಕ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿ ಮಗು ಅಹಿಂಸಾ ತತ್ವವನ್ನು ಪಾಲಿಸಬೇಕೆಂಬುದು ಸುಸ್ಪಷ್ಟ ಕರ್ತವ್ಯ ಮತ್ತು ಜವಾಬ್ದಾರಿಯೆಂದು ತಿಳಿಯಬೇಕು.

ಮಕ್ಕಳು ರಾಷ್ಟ್ರದ ನಿರಂತರ ಸಾಧನೆ ಮತ್ತು ಸಿದ್ಧಿಯ ಉನ್ನತ ಮಟ್ಟ ತಲುಪಲು ವೈಯಕ್ತಿಕ ಹಾಗೂ ಸಾಮಾಜಿಕ ಚಟುವಟಿಕೆಯ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿ ಶ್ರೇಷ್ಟತೆಗಾಗಿ ಶ್ರಮಿಸಬೇಕು. ಒಂದು ದೇಶ ನಿರಂತರವಾಗಿ ಪ್ರಗತಿಯನ್ನು ಸಾಧಿಸಿ ಉನ್ನತ ಮಟ್ಟಕ್ಕೆ ತಲುಪಲು ಸಮಾಜದ ಪ್ರತಿಯೋರ್ವ ಪ್ರಜೆಯು ವೈಯಕ್ತಿಕ ಸಾಧನೆಯೂ ಪ್ರಥಮ ಕರ್ತವ್ಯವಾಗಿದೆ. ಅದೇ ರೀತಿ ಆ ಮೂಲಕ ಸಮಾಜದ ಸಾಮಾಜಿಕ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸಿ, ದೇಶವನ್ನು ಪ್ರಗತಿಪರ ರಾಷ್ಟ್ರವನ್ನಾಗಿಸುವ ಆದ್ಯ ಕರ್ತವ್ಯ ಹೊಂದಿ ಸಮಾಜದ ಜನತೆ ನೆಮ್ಮದಿಯಿಂದ ಸುಖ-ಶಾಂತಿಯಿಂದ ಬಾಳುವಂತೆ ಸಹಕರಿಸುವ ಜವಾಬ್ದಾರಿಯನ್ನು ಬೆಳೆಸಿಕೊಳ್ಳಬೇಕು.

ಇಲ್ಲಿ ತಿಳಿಸಿರುವಂತಹ ಕರ್ತವ್ಯಗಳು ಮತ್ತು ಜವಾಬ್ದಾರಿಗಳು ಮಕ್ಕಳಲ್ಲಿ ಮೂಡಿಸಲು ಸಮಾಜದ ನಾಯಕರು, ಶಿಕ್ಷಕರು ಮತ್ತು ಪೋಷಕರು ವಿಫಲವಾಗಿರುವುದು ದುಃಖಕರವಾದ ಸಂಗತಿಯಾಗಿದೆ. ಮಕ್ಕಳ ಮತ್ತು ಸಮಾಜದ ಭವಿಷ್ಯದ ಬಗ್ಗೆ ಚಿಂತಿಸುವಂತಹ ಜನರನ್ನು ಕಾಣುವುದೆ ಅಪರೂಪವೆಂಬಂತೆ ಜೀವನದ ಮೌಲ್ಯಗಳು ನಶಿಸುತ್ತಿವೆ. ಸಮಾಜ ನಮಗೇನು ಕೊಟ್ಟಿದೆ ? ಎನ್ನುವುದಕ್ಕಿಂತ ನಾವು ಸಮಾಜಕ್ಕೆ ಏನನ್ನು ಕೊಟ್ಟದ್ದೇವೆ ? ಎನ್ನುವೆಡೆ ಚಿಂತನೆ ಅತ್ಯಗತ್ಯ. ಕಾಲ ಯಾರನ್ನೂ ಕಾಯುವುದಿಲ್ಲ. ನಮ್ಮ ಹಿರಿಯರು ಹೇಳುವಂತೆ ಮಾನವ ಜನ್ಮಎಂಬುದು ಅಪರೂಪ ಈ ಜೀವನವನ್ನು ಸಾರ್ಥಕ ಪಡಿಸಿಕೊಳ್ಳಲು ಭವಿಷ್ಯದ ಮಕ್ಕಳಿಗೆ ಕರ್ತವ್ಯಗಳ ಬಗ್ಗೆ ತಿಳುವಳಿಕೆ ಮತ್ತು ಮಾರ್ಗದರ್ಶನ ನೀಡಿ ಸಮಾಜವನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯುವ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಬೆಳೆಸುವಲ್ಲಿ ಸ್ಕ್ಯಾಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ನಿರ್ವಹಿಸುತ್ತಿರುವ ಕಾರ್ಯವು ಶ್ಲಾಘನೀಯ.



# ಪುಸ್ತಕಗಳೆಂಬ ಹೊರೆ

*ಪ್ರೊ. ಕೆ. ಓಂಕಾರಪ್ಪ*

"ರಾಷ್ಟ್ರಾದ್ಯಂತ ಶಾಲಾ ಮಕ್ಕಳು ತಮ್ಮ ಹೆಗಲಿನ ಮೇಲೆ ಹೊರಲಾರದಂಥ ಪುಸ್ತಕಗಳನ್ನು ಹೊರುತ್ತಿರುವ ಪದ್ಧತಿಯನ್ನು ತಪ್ಪಿಸುವಂತೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಗೆ ನಿರ್ದೇಶನ ಕೋರಿ ಬೆಂಗಳೂರುನಗರದ ವರದಾಚಾರ್ ಮೆಮೋರಿಯಲ್ ಸಂಘದ ಅಧ್ಯಕ್ಷ ಪಿ. ಎಸ್. ರಂಗನಾಥಾಚಾರ್ ಎಂಬುವರು ರಾಜ್ಯ ಹೈಕೋರ್ಟ್‌ನಲ್ಲಿ ಅರ್ಜಿಯೊಂದನ್ನು ಸಲ್ಲಿಸಿದ್ದಾರೆ".

ಕೆಲವು ವರ್ಷಗಳ ಹಿಂದೆ ರಾಜ್ಯ ಮಟ್ಟದ ಪತ್ರಿಕೆಯೊಂದರಲ್ಲಿ (ಕನ್ನಡ ಪ್ರಭ) ಮೇಲ್ಕಂಡಂತೆ ವರದಿ ಪ್ರಕಟವಾಗಿದೆ. ಅತ್ಯಂತ ಗಂಭೀರ ಸ್ವರೂಪದ ಈ ವರದಿ ಅದೆಷ್ಟೋ ವರದಿಗಳಂತೆ ಜನರ ಗಮನ ಸೆಳೆಯುವುದಕ್ಕಿಂತ ಉಪೇಕ್ಷೆಗೆ ಒಳಗಾಗುವ ಸಾಧ್ಯತೆಯೇ ಬಹಳವಾಗಿದೆ. ಶಿಕ್ಷಣ, ಮತ್ತು ಶಿಕ್ಷಣದ ಸುಧಾರಣೆಯನ್ನು ಕುರಿತಂತೆ ಅನೇಕ ದಶಕಗಳಿಂದ ಚರ್ಚೆಗಳು, ವಿಚಾರ ಗೋಷ್ಠಿಗಳು ನಡೆದಿವೆ. ಆಯೋಗಗಳು ಕೂಡ ರಚನೆಯಾಗಿವೆ. ಆದರೆ ಆಗಿರುವ ಬದಲಾವಣೆ ನಿರೀಕ್ಷಿಸಿದ ಮಟ್ಟದಲ್ಲಿಲ್ಲ ಎನ್ನುವುದನ್ನು ಯಾರು ಅಲ್ಲಗಳೆಯಲಾರರು. ಇದಕ್ಕೆ ಅನೇಕ ಕಾರಣಗಳಿರಬಹುದು. ಆ ಎಲ್ಲಾ ಕಾರಣಗಳನ್ನು ದಾಖಲಿಸುವುದು ಇಲ್ಲಿಯ ಉದ್ದೇಶವಲ್ಲ. ಅದು ಚರ್ಚೆಗೆ ಮತ್ತೊಂದು ವಿಷಯವಾಗಬಹುದು.

ಒಂದು ನಿರ್ದಿಷ್ಟ ರೂಪುರೇಷೆ ಇಲ್ಲದ ಶಿಕ್ಷಣ, ಇದ್ದರೂ ಸಾರ್ವತ್ರಿಕವಾಗಿ ಪ್ರಯೋಜನವಾಗದ ಶಿಕ್ಷಣಕ್ರಮದಿಂದಾಗಿ ಶಿಕ್ಷಣ ಕ್ಷೇತ್ರದಲ್ಲಿ ನಿರೀಕ್ಷಿಸಿದ ಗುರಿಯನ್ನು ನಾವು ಮುಟ್ಟಲಾಗಿಲ್ಲ. ಶಿಕ್ಷಣವನ್ನು ಕೊಡಬೇಕಾದ ಭಾಷೆ, ಭಾಷೆಯನ್ನು ಕಲಿಸಬೇಕಾದ ವಿಧಾನ, ಅದಕ್ಕೆ ಪೂರಕವಾಗುವಂತಹ ಪಠ್ಯವಿಷಯ, ಪಠ್ಯವಿಷಯಗಳನ್ನು ಬೋಧಿಸುವಾಗ ಬೇಕಾಗುವ ಅಗತ್ಯ ಪೂರಕ ಸಾಮಗ್ರಿಗಳು, ಪರಿಸರ ಇತ್ಯಾದಿ ಅವಕಾಶಗಳಿಂದ ಮಗು ವಂಚಿತವಾಗುತ್ತಿರುವುದು ಮಾತ್ರವಲ್ಲ ಕಲಿಯುವಿಕೆ ಅದಕ್ಕೆ ಹೊರೆಯಾಗಿ ಕಲಿಕೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕಾದ ಮಗು ಸಹಜವಾಗಿ ಆಸಕ್ತಿಯನ್ನು ಕಳೆದುಕೊಳ್ಳುತ್ತಿರುವುದನ್ನು ನಾವಿಂದು ಕಾಣುತ್ತಿದ್ದೇವೆ.

ಮಾತೃಭಾಷೆಯೊಂದು ಮಗುವಿನ ಸಹಜಾಭಿವ್ಯಕ್ತಿಗೆ ಸಹಾಯಕವಾಗಿ ಭಾಷಾಕಲಿಕೆ ಸುಲಭವಾಗುವುದರಲ್ಲಿ ಯಾವ ಅನುಮಾನವೂ ಇಲ್ಲ. ಈ ಮಾತೃಭಾಷೆಯನ್ನು ಕಲಿಸುವುದರಲ್ಲಿಯೂ ನಮ್ಮ ಶಿಕ್ಷಣದ ಕ್ರಮ ಪೂರಕವಾಗಿಲ್ಲ. ಮಾತೃಭಾಷೆಯೊಂದು ಭಾಷಾಕಲಿಕೆಯೊಂದಿಗೇ ಸುಲಭವಾಗಿ ಜ್ಞಾನವನನ್ನು ದೊರಕಿಸಿಕೊಡುತ್ತದೆನ್ನುವ ಪ್ರಾಥಮಿಕ ಜ್ಞಾನವೂ ನಮಗಿಲ್ಲವಾಗಿ ಇಷ್ಟೆಲ್ಲಾ ಕಷ್ಟ-ನಷ್ಟಗಳನ್ನು ನಿರಪರಾಧಿಯಾದ ಮಗು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಗಿದೆ. ನಾವು ಶಿಕ್ಷಣಕೊಡುತ್ತಿರುವುದು ಯಾರಿಗೆ? ಅಲ್ಲಿಯ ಪರಿಸರ, ಭಾಷೆ ಈ ಯಾವುದನ್ನು ಇಂದಿನ ಶಿಕ್ಷಣ ಸರಿಯಾಗಿ ಯೋಚಿಸಿದಂತೆ ಕಾಣುತ್ತಿಲ್ಲ. ತಲೆಗೆಲ್ಲ ಒಂದೇ ಮಂತ್ರವೆಂಬಂತೆ ಕ್ರಮವೆಂಬುದೊಂದನ್ನು ಜಾರಿ ಮಾಡಿ ಕೈತೊಳೆದುಕೊಂಡಿದೆ.

ಇಂದು ಹಣಗಳಿಕೆಯೊಂದೇ ಬಹುತೇಕ ಶಿಕ್ಷಣ ಸಂಸ್ಥೆಗಳ ಮಹತ್ತರ ಜವಬ್ದಾರಿಯಾಗಿ ಹಣಗಳಿಕೆಗಾಗಿ ಅನೇಕ ಶಿಕ್ಷಣ ಸಂಸ್ಥೆಗಳೂ ಹೂಡುವ ತಂತ್ರ, ಪಾಲಕ, ಪೋಷಕರನ್ನು ಆತಂಕಕ್ಕೆ ಒಳಗುಮಾಡಿದೆ. ಶಿಕ್ಷಣ ಮಾಧ್ಯಮದ ವಿಚಾರದಲ್ಲಿ ಕೂಡ ಸರಕಾರದ ನೀತಿ ಖಚಿತವಾದಷ್ಟು ಶಿಕ್ಷಣದ ಕ್ರಮ ಸುಗಮವಾಗಬಹುದು. ಆದರೆ ಇದು ಸಾಧ್ಯವಾಗಿದೆಯೇ? ನಮ್ಮ

ಎಡಬಿಡಂಗಿತನದ ಆಡಳಿತ ವ್ಯವಸ್ಥೆಯೇ ನಾಯಿಕೊಡಗಳಂತೆ. ಆಂಗ್ಲಮಾಧ್ಯಮದ ಶಾಲೆಗಳು ತಲೆಯೆತ್ತಲು ಕಾರಣವಾಗಿದೆ. ಶಿಕ್ಷಣದಲ್ಲಿ ಭಾಷೆಯನ್ನು ಕಲಿಸುವುದು, ಹೆಚ್ಚು ಹೆಚ್ಚು ಭಾಷೆಗಳನ್ನು ಕಲಿಸುವುದು ಜ್ಞಾನಾರ್ಜನೆಗೆ ಪೂರಕವೇ? ಆದರೆ ಯಾವ ಹಂತದಲ್ಲಿ ಹೇಗೆ ಕಲಿಸಬೇಕು ಎನ್ನುವುದು ಅಷ್ಟೇ ಮುಖ್ಯ ಎನ್ನುವುದನ್ನು ನಾವು ಮನಗಾಣಬೇಕಾಗಿದೆ. ಈ ಆಂಗ್ಲಮಾಧ್ಯಮದ ಬಹುತೇಕ ಶಾಲೆಗಳು ಖಾಸಗಿ ಕ್ಷೇತ್ರದವರು ನಡೆಸುತ್ತಿದ್ದು, ಅಲ್ಲಿಯ ಪೈಪೋಟಿ, ತಳುಕು-ಬಳುಕು, ಜತೆಗೆ ತಮ್ಮ ಪ್ರತಿಷ್ಠೆಯನ್ನು ಪ್ರದರ್ಶಿಸಿಸಬೇಕೆಂಬ ಚಪಲ, ಅಂತೂ ತಮ್ಮ ಮಕ್ಕಳನ್ನು ಆಂಗ್ಲಮಾಧ್ಯಮದ ಶಾಲೆಗೆ ಕಳುಹಿಸುತ್ತಿರುವುದು ಎಲ್ಲೆಡೆ ಸಾಮಾನ್ಯವಾಗಿದೆ. ಈ ಸಂದರ್ಭದಲ್ಲಿ ನಾವು ಯೋಚಿಸಬೇಕಾಗಿರುವುದು ಸರ್ಕಾರಿ ಶಾಲೆಗಳ ಸ್ಥಿತಿಗತಿಗಳನ್ನು ಕುರಿತಂತೆ. ಸರ್ಕಾರ ಮನಸ್ಸುಮಾಡಿ ಅಗತ್ಯ ಸೌಲಭ್ಯ, ಸೌಕರ್ಯಗಳನ್ನು ಸರ್ಕಾರಿ ಶಾಲೆಗಳಿಗೂ ಒದಗಿಸಿದಲ್ಲಿ ಬಹಳಷ್ಟು ಮಕ್ಕಳ ಪಾಲಕರು, ಪೋಷಕರು ನಿರಾಳವಾಗಿ ಉಸಿರಾಡಬಹುದೇನೊ? ಯಾಕೆ ಸರ್ಕಾರ ಈ ನಿಟ್ಟಿನಲ್ಲಿ ಯೋಚಿಸುತ್ತಿಲ್ಲ. ಉತ್ತರ ಸ್ಪಷ್ಟವೇ ಇದೆ.

ಮೊದಲನೆಯ ತರಗತಿಗೆ ಸೇರುವ ಮಗುವಿನ ವಯಸ್ಸು ಐದುವರ್ಷ ಹತ್ತುತಿಂಗಳು ಇರಬೇಕು ಎನ್ನುವುದೊಂದು ನಿಯಮ. ಇಲ್ಲಿ ಮಗು ತನ್ನ ಪರಿಸರವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ. ಆ ಪ್ರಯತ್ನಕ್ಕೆ ಪೂರಕವಾದ ಶಿಕ್ಷಣದೊರೆತಲ್ಲಿ ಸಹಜವಾಗಿಯೇ ಮಗು ಎಲ್ಲಾ ವಿಷಯಗಳ ಬಗೆಗೆ ಕುತೂಹಲ ತಾಳುತ್ತದೆ. ಆ ಕುತೂಹಲವನ್ನು ತಣಿಸುವಲ್ಲಿ ಶಿಕ್ಷಣ ಸಹಜಕಾಳಜಿಯಿಂದ ಮುಂದಾದರೆ ಮಗು ಮತ್ತಷ್ಟು ಕಲಿಯಲು ಪ್ರಯತ್ನಿಸುತ್ತದೆ. ಅಂದರೆ ನಾವು ಕೊಡುವ ಶಿಕ್ಷಣ ಸಹಜವಾಗಿ, ಸರಳವಾಗಿದ್ದಾಗ ಮಗುವಿನ ಕುತೂಹಲ ಕಲಿಕೆಯಲ್ಲಿ ತನ್ನನ್ನೂ ತೊಡಗಿಸಿಕೊಳ್ಳುವಲ್ಲಿ ಖಂಡಿತ ಸಾಧ್ಯವಾಗುತ್ತದೆ. ಆದರೆ ಇಂದಿನ ನಿರ್ಬಂಧ ಶಿಕ್ಷಣದಲ್ಲಿ ಅದು ಸಾಧ್ಯವಾಗಿದೆಯೇ? ಸಾಧ್ಯವಾದರು ಫಲಪ್ರದವಾಗಿದೆಯೇ? ಯೋಚಿಸಬೇಕಾಗಿದೆ. ಸಹಜ ಕುತೂಹಲಕ್ಕೆ ಒಳಗಾಗಬೇಕಾಗಿದ್ದ ಆ ಮುಗ್ಧ ಮನಸ್ಸು ಈ ನಿರ್ಬಂಧ ಶಿಕ್ಷಣಕ್ರಮದಿಂದಾಗಿ ಕುತೂಹಲ ಅರಳದೆ ಬುದ್ಧಿ ಜಾಗೃತವಾಗದೆ ತಟಸ್ಥವಾಗಿ ಬಿಡಬಹುದು. ಇದರ ಜೊತೆಗೆ ಶಾಲೆಯ ಪರಿಸರ, ಅಲ್ಲಿಯ ಬೋಧನೆ, ಪಠ್ಯ ವಿಷಯಗಳು, ನಿರ್ಬಂಧವಾದರಂತೂ ಮಗುವಿನ ಮಾನಸಿಕ ಬೆಳವಣಿಗೆ ಮತ್ತಷ್ಟೂ ಕುಂಠಿತವಾಗುವದರಲ್ಲಿ ಯಾವ ಅನುಮಾನವು ಇಲ್ಲ. ಪ್ರಾರಂಭಿಕ ಹಂತದಲ್ಲಿ ಮಗುವಿನ ಕಲಿಕೆ ಎರಡೂ ಮುಖಗಳಲ್ಲಿ ನಡೆಯ ಬೇಕಾಗುತ್ತದೆ. ಒಂದು ಪಠ್ಯ ವಿಷಯ, ಮತ್ತೊಂದು ಪಠ್ಯೇತರ ಚಟುವಟಿಕೆಗಳು. ಪಠ್ಯತೇರ ಮೂಲಕವೇ ಮಗು ತನ್ನ ಕಲಿಕೆಯನ್ನು ನಿಜವಾಗಿ ಪ್ರಾರಂಭಿಸುತ್ತದೆ, ಪ್ರಾರಂಭಿಸಬೇಕು. ಆಟೋಟದ ಕಡೆಗೆ ಮಗುವಿನ ಬಯಕೆ ಸಹಜ. ಈ ಬಯಕೆ ಈಡೇರಿಸುತ್ತಲೆ ತನ್ನ ಉದ್ದೇಶ ಸಾಧಿಸುವುದು ಶಿಕ್ಷಣದ ಕೆಲಸವಾಗಬೇಕು. ಇಲ್ಲಿ ಮಗು ತಾನು ಕಾಣುವ ವಸ್ತುಗಳನ್ನು, ಸಂಗತಿಗಳನ್ನು ಇದು ಏನು? ಏಕೆ ? ಈ ಪ್ರಶ್ನೆಗಳನ್ನು ಹಾಕುವುದರ ಮೂಲಕ ವಿಷಯಗಳನ್ನು ತಿಳಿಯಲು ಪ್ರಯತ್ನಿಸುತ್ತದೆ. ಅಂದರೆ ಕಾಣದ ವಸ್ತುವಿನ ಬಗೆಗೆ ಕುತೂಹಲ ಈ ಹಂತದಲ್ಲಿ ಮಗುವಿಗೆ ಸಾಧ್ಯವಿಲ್ಲ. ಈ ದೃಷ್ಟಿಯಿಂದ ಪಠ್ಯೇತರ ಚಟುವಟಿಕೆಗಳನ್ನು ಪಠ್ಯಪೂರಕಗಳಾಗಿ, ಪರಿಣಾಮಕಾರಿಯಾಗಿ ಬಳಸಿಕೊಳ್ಳುವ ಜಾಣ್ಮೆಯನ್ನು ಶಿಕ್ಷಣ ಕ್ರಮದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ.

ಪಠ್ಯಪುಸ್ತಕಗಳು, ಬರವಣಿಗೆಗಳ ಸಾಮಗ್ರಿಗಳ ಸಂಖ್ಯೆ, ಪಠ್ಯ ವಿಷಯಗಳ ವ್ಯಾಪ್ತಿ ಈ ಗೊಂದಲದಲ್ಲಿ ಸಿಲುಕಿದ ಮಗು ಒಂದು ರೀತಿಯಲ್ಲಿ ತಲ್ಲಣಕ್ಕೊಳಗಾಗಿರುವುದು ನಿಜವೇ ಇದೆ. ಸರಳವಾಗಿ, ಸುಲಭವಾಗಿ ಕಲಿಯುಲು ಯಾವಾಗ ಸಾಧ್ಯವಾಗುವುದಿಲ್ಲವೋ ಮಗುವಿನ ಕಲಿಕೆ ಕುಂಠಿತವಾಗುವುದರಲ್ಲಿ ಯಾವ ಅನುಮಾನವು ಇಲ್ಲ. ಆಸಕ್ತಿ, ಕುತೂಹಲದೊಂದಿಗೆ ಶಾಲೆಗೆ ಹೋಗಬೇಕಾದ ಮಗು ಭಯದಿಂದ ವಿಹ್ವಲವಾಗುತ್ತಿರುವುದನ್ನು ನಾವಿಂದು ಸಾಮಾನ್ಯವಾಗಿ ಎಲ್ಲಾಕಡೆ ಕಾಣುತ್ತಿದ್ದೇವೆ. ಶಾಲೆ ಪ್ರಾರಂಭವಾಯಿತೆಂದರೆ ಮಗು ಯಾಂತ್ರಿಕವಾಗಿ ಶಾಲೆಯ ಪರಿಸರಕ್ಕೆ ಅನಿವಾರ್ಯವಾಗಿ ಹೊಂದಿಕೊಳ್ಳಬೇಕಾಗುತ್ತದೆ. ಓದುವುದು, ಬರೆಯುವುದು ಇರಲಿ ಅಯ್ಯೋ ನಾಳೆ ಶಾಲೆಗೆ ಹೋಗಬೇಕಲ್ಲಾ ಎನ್ನುವ ಆತಂಕದಿಂದಲೇ ಮಗು ಶಾಲೆಗೆ ಪುಸ್ತಕದ ಮೂಟೆ ಹೊತ್ತು ಹೋಗಬೇಕಾಗಿದೆ. ಇನ್ನು ಪಠ್ಯ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿ ಹೇಳದಿರುವುದೆ ಉಚಿತ. ಪಠ್ಯವಿಷಯ ಮಗುವಿನ ಮನೋವಿಕಾಸಕ್ಕೆ ಪೂರಕವಾಗಬೇಕು ತಾನೆ? ಅನೇಕ ಪೋಷಕರಿಗೆ ಇದೊಂದು ದೊಡ್ಡ ಸಮಸ್ಯೆಯಾಗಿದೆ. ಸಾಮಾನ್ಯ ಬುದ್ಧಿಶಕ್ತಿಯ ಮಗು ಮತ್ತಷ್ಟು ವಿಫಲವಾಗುವುದರಲ್ಲಿ ಅನುಮಾನವಿಲ್ಲ. ಇಷ್ಟೊಂದು ಪಠ್ಯಪುಸ್ತಕಗಳು

ಬರವಣಿಗೆ ಸಾಮಗ್ರಿ ಈ ಹಂತದಲ್ಲಿ ಮಕ್ಕಳಿಗೆ ಯಾಕೆ?. ಖಾಸಗಿ ಆಡಳಿತ ಮಂಡಳಿಯ ಸದಸ್ಯರೊಬ್ಬರು ಹೇಳುತ್ತಾರೆ. ''ನೋಡಿ ದೆಹಲಿಯಂತಹ ಶಾಲೆಗಳಲ್ಲಿ ಪಠ್ಯ ಪುಸ್ತಕಗಳು, ಬರೆಯುವ ಪುಸ್ತಕಗಳ ಸಂಖ್ಯೆ ಇಲ್ಲಿಗಿಂತ ಇನ್ನೂ ಹೆಚ್ಚು. ಈಗ ನಿಮಗೆ ಹಾಗೆ ಕಾಣಿಸಬಹುದು. ಆ ಮೇಲೆ ಸರಿಯಾಗುತ್ತೆ'' ಎನ್ನುತ್ತಾರೆ. ಇಲ್ಲಿ ಸರಿಯಾಗುವುದೇನು? ಮಗುವಿನ ಬೆನ್ನುಹುರಿಯೇ? ಪ್ರಶ್ನಿಸಿಕೊಳ್ಳಬೇಕಾಗಿದೆ. ಈ ಕಾರಣದಿಂದಾಗಿ ಮಗುವಿಗೆ ಮನೆಪಾಠ ಒಂದು ರೀತಿಯಲ್ಲಿ ಅನಿವಾರ್ಯವಾಗಿ ಶಾಲಾ ನಂತರ ಸಹಜವಾಗಿ ಮಕ್ಕಳೊಂದಿಗೆ ಕಾಲ ಕಳೆಯಬೇಕಾದ ಮಗು ಮನೆ ಕೆಲಸ, ಮನೆ ಪಾಠದ ಬಂಧನದಲ್ಲಿ ತೊಳಲಾಡಬೇಕಾಗಿದೆ. ಅನಾಥ ಪ್ರಜ್ಞೆ ಇಂದಿನ ಮಗುವಿನಲ್ಲಿ ಆವರಿಸಿದ್ದರೆ ಆಶ್ಚರ್ಯ ಪಡಬೇಕಾಗಿಲ್ಲ.

ಒಂದು ಉನ್ನತ ಆದರ್ಶವನ್ನಿಟ್ಟುಕೊಂಡು ಶಾಲೆಗೆ ಪೂರಕವಾದ ಸಮವಸ್ತ್ರ ದುಬಾರಿಯಾಗಿ ಶ್ರೀಸಾಮಾನ್ಯ ಇದನ್ನು ತಮ್ಮ ಮಗುವಿಗೆ ಒದಗಿಸುವಲ್ಲಿ ಕಷ್ಟಪಡಬೇಕಾಗಿದೆ. ಹಾಗೆಂದು ಸಮವಸ್ತ್ರ ಇರಬಾರದೆಂದಲ್ಲ. ಜನ ಸಮುದಾಯದ ಆಶೋತ್ತರಗಳನ್ನು ಗಮನದಲ್ಲಿಟ್ಟುಕೊಂಡು ಶಿಕ್ಷಣ ಸಂಸ್ಥೆಗಳು ಇಲ್ಲಿ ಹೆಜ್ಜೆ ಇಡ ಬೇಕಾಗಿದೆ. ಶಿಸ್ತಿನ ಹೆಸರಿನಲ್ಲಿ ನಾವಿಂದು ಶಿಕ್ಷಣದ ನಿಜ ಆಶಯವನ್ನು ಕಡೆಗಾಣಿಸುವುದಾಗಲ್ಲಿ ಸಮವಸ್ತ್ರಕ್ಕೆ ಅರ್ಥವೇ ಇಲ್ಲ. ಒಂದು ಕಾಲದಲ್ಲಿ ಮರಳಿನ ಮೇಲೆ ಅಕ್ಷರಾಭ್ಯಾಸ ಮಾಡಿಸುತ್ತಿದ್ದರೆಂದು ನಾವು ಕೇಳಿದ್ದೇವೆ. ಹಾಗೆ ಅಭ್ಯಾಸ ಮಾಡಿಸುವಾಗ ಪ್ರತಿಯೊಬ್ಬರಿಗೂ ಅಕ್ಷರಾಭ್ಯಾಸ ಮಾಡಲು ಇದ್ದ ಸುಲಭ ಸಾಧ್ಯತೆಯನ್ನು ನಾವು ಗಮನಿಸಬೇಕಾಗುತ್ತದೆ. ಇಂದಿನ ಕಾಗದದ ಬೆಲೆ ದುಬಾರಿಯಾಗಿರುವ ಸನ್ನಿವೇಶದಲ್ಲಿ ಸ್ಲೇಟಿನ ಪ್ರಯೋಜನವನ್ನು ಮಕ್ಕಳು ಸಾಕಷ್ಟು ಪಡೆದುಕೊಳ್ಳುವಂತೆ ಯೋಚಿಸಬೇಕಾಗಿದೆ. ಶಿಕ್ಷಣದ ಯಶಸ್ಸು ಸಮೂಹದ ಹಿತವನ್ನು ಬಯಸಬೇಕೆಂದು ನಾವು ಆಶಿಸುವುದಾದರೆ ಪಾಲಕರ, ಪೋಷಕರ, ಅಧ್ಯಾಪಕರ, ಆಡಳಿತ ಮಂಡಳಿಯ ಸಂಬಂಧ ಸುಮಧುರವಾಗಿರುವಂತೆ ನೋಡಿಕೊಳ್ಳಬೇಕಾಗುತ್ತದೆ. ಯಾರೂ ಇಲ್ಲಿ ಜವಾಬ್ದಾರಿಯಿಂದ ವಂಚಿತರಾಗುವಂತಿಲ್ಲ. ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಗಮನಿಸಿದಾಗ ಬೆಳವಣಿಗೆ ಆಶಾದಾಯಕವಾಗಿಲ್ಲ. ಈ ಪರಿಸ್ಥಿತಿಯ ಅರಿತಿದ್ದವರು ಕೂಡ ಈ ಮಹಾಕಾರ್ಯಕ್ಕೆ ಮುಂದಾಗುತ್ತಿಲ್ಲ. ಈ ದಿಸೆಯಲ್ಲಿ ಕಾನೂನಿನ ಮೂಲಕ ಕ್ರಮ ಕೈಗೊಳ್ಳುವುದು ಅನಿವಾರ್ಯವಾಗಬಹುದು. ಈ ದೃಷ್ಟಿಯಿಂದ ಶ್ರೀ ಸಿ. ಎಸ್. ರಂಗನಾಥಾಚಾರ್ ನಿಜಕ್ಕೂಅಭಿನಂದನೀಯರು. ಅರ್ಥಪೂರ್ಣವಾದ ಶಿಕ್ಷಣವನ್ನು ಮಕ್ಕಳಿಗೆ ದೊರಕಿಸುವಲ್ಲಿ ನಾವು ಇನ್ನಾದರೂ ಮುಂದಾಗದಿದ್ದಲ್ಲಿ ಭಾವಿಸಮಾಜ, ರಾಷ್ಟ್ರದ, ಭವಿಷ್ಯವೇನು? ಎನ್ನುವ ಚಿಂತೆಯನ್ನು ಪ್ರತಿಯೊಬ್ಬರು ಮಾಡಬೇಕಲ್ಲವೇ? ಪ್ರಾಮಾಣಿಕವಾಗಿ ಕಾರ್ಯ ತತ್ಪರರಾಗಬೇಕಲ್ಲವೇ?



೨೦ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣತಜ್ಞರಿಂದಲ್ಲ ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.

\- ಜಾರ್ಜ್ ಬರ್ನಾರ್ಡ್ ಷಾ

# ನನ್ನಾಸೆ

*ಟಿ. ಎಸ್. ವಾಸಂತಿ*

ಆಧುನಿಕತೆಯ ಗುಂಗಿನಲ್ಲಿ ಓಲಾಡುತ್ತಾ, ನಮ್ಮ ದೇಶ, ನಮ್ಮ ಜನ, ನಮ್ಮದೆಂಬ ಅಭಿಮಾನವನ್ನು ಮರೆತು ಆಡಂಬರದಿ ಮೆರೆಯುವ ಜನತೆಗೊಂದು ಕಿವಿಮಾತು ಹೇಳಬೇಕೆಂಬ ಆಸೆ.

ನೈಜತೆಯಿಂದ ಬದುಕುವ ಜನರನ್ನು ಕಂಡು ಅನಾಗರಿಕರು ಎಂದು ಮೊದಲಿಸುವ ಜನಕ್ಕೆ, ಪುಟ್ಟ ಹುಡುಗಿಯ ನಡತೆಯನ್ನು ಬೆರಳಿಟ್ಟು ತೋರಿಸಿ ಅವರ ಮೂರ್ಖತನವನ್ನು ಹೋಗಲಾಡಿಸಲು ನನಗಾಸೆ. ಬರಿಯ ನೆಪಮಾತ್ರಕ್ಕೆ ನಾವು ಹಿರಿಯರು ವಯಸ್ಸಿನಲ್ಲಿ, ನಮಗೆ ಸಾಧನೆಯ ಗುರಿಯಿದೆಯೇ ? ನಾವೇನನ್ನೂ ಸಾಧಿಸಿದ್ದೇವೆ? ಆದರೆ ಪುಟ್ಟ ಕಂದಮ್ಮ ತನ್ನ ೯ನೆಯ ವಯಸ್ಸಿನಲ್ಲಿಯೇ ಏನೆಲ್ಲಾ ಸಾಧಿಸಿಲು ಸಾಧ್ಯ ಎಂಬುದನ್ನು ಹೇಳುವಾಸೆ. ನಮ್ಮಿಂದ ಹೇಳಿಕೊಳ್ಳುವ ಸಾಧನೆಯನ್ನು ಸಾಧಿಸಲಾಗದಿದ್ದರೂ ಮಾರ್ಗದರ್ಶಕಗಳಾಗಿ ಕೆಲವು ಮಕ್ಕಳಿಗಾದರೂ ಸಾಧನೆಯ ಹಾದಿಯಲ್ಲಿ ನಡೆಸುವಾಸೆ. ಮುಂಬರುವ ಜನಾಂಗಕ್ಕೆ ಪ್ರೋತ್ಸಾಹಿಸಿ, ಹರಸಿ ಹಾರೈಸುವಾಸೆ.

ಆರು ವರ್ಷದ ಪುಟ್ಟ ಬಾಲಕಿ, ನಾನು ಬುಲ್ ಬುಲ್ಸ್‌ಗೆ ಸೇರುತ್ತೀನಿ ಮಿಸ್ ಎಂದಾಗ ಅವರಮ್ಮ ಇವಳದೇನೋ ಸೇರ್ತಾಳಂತೆ ಹಾಗೆಂದರೇನು ? ಎಂದಾಗ, ನಾನು ಬುಲ್ ಬುಲ್ ಬಗ್ಗೆ ಹೇಳುತ್ತಾ ಹೋದೆ.

೫ರಿಂದ ೧೦ ವರ್ಷದ ವರೆಗಿನ ಚಿಕ್ಕಬಾಲಕಿಯರಿಗಾಗಿ ಇರುವ ಸಂಘಟನೆ ಸ್ಕೌಟ್ ಗೈಡ್ ಸಂಸ್ಥೆಯ ಪ್ರಥಮ ಹೆಜ್ಜೆ. ಈ ಕಬ್ ಮತ್ತು ಬುಲ್ ಬುಲ್. ನಿಯಮಗಳ ಪಾಲನೆಯಿಂದ ಶಿಸ್ತು, ಸಂಯಮ, ಗೌರವ ಮುಂತಾದ ವಿಷಯಗಳನ್ನು ಕಲಿಯುತ್ತೇವೆ. ಅಲ್ಲದೆ ಆ ಪುಟ್ಟ ಬಾಲಕಿಯ ಸರ್ವತೋಮುಖ ಬೆಳವಣಿಗೆಯಲ್ಲಿ ಬುಲ್ ಬುಲ್ ಬಹಳ ಸಹಕಾರಿಯಾಗಿದೆ. ತ್ಯಾಗ, ಧೈರ್ಯ ಹಾಗೂ ಸಹಾಯ ಮಾಡುವ ಮನೋಭಾವನೆಯನ್ನು ಕಲಿಸುತ್ತದೆ. ಮನೆಯಲ್ಲಿರಲಿ, ಸಾರ್ವಜನಿಕ ಸ್ಥಳಗಳಲ್ಲಿರಲಿ ಅವಳಿಗೆ ಸನ್ನಡತೆಯ ಅರಿವನ್ನು ಮೂಡಿಸುತ್ತದೆ. ದೇವರು, ಹಿರಿಯರು ಹಾಗೂ ದೇಶದ ಬಗ್ಗೆ ಗೌರವವನ್ನು ತೋರಿಸುವ ಸತ್ಪ್ರಜೆಯಾಗುವ ಲಕ್ಷಣಗಳನ್ನು ಬಾಲ್ಯದಲ್ಲಿಯೇ ಮೂಡಿಸುತ್ತದೆ. ಹೆಜ್ಜೆ ಹೆಜ್ಜೆಗೂ ಮಾನವೀಯತೆಯ ಸವಿಮಾತುಗಳೊಂದಿಗೆ ಬೆಳೆಸುತ್ತದೆ.

೫ ವರ್ಷದ ಮಗು ಆಗತಾನೆ ತಾಯ ಮಡಿಲ ಬಿಟ್ಟು ಶಾಲೆಎಂಬ ಹೊರಪ್ರಪಂಚದ ಪ್ರಥಮ ಬೆಳಕಿನ ಸುಧೆಯನ್ನು ನೋಡುತ್ತಿರುವಾಗ ಆ ಪ್ರಭೆಯಲ್ಲಿ ಬುಲ್ ಬುಲ್ ಎಂಬ ಹೊಸ ಬಣ್ಣದ ಕಿರಣವನ್ನು ನೋಡುವಾಗ ಏನೋ ಹೊಸದೆಂಬಂತೆ ನಲಿದಾಡುತ್ತದೆ. ಈ ಪುಟ್ಟ ಕಂಗಳ ಆಸೆ ಹಾಗೂ ವಯಸ್ಸಿಗನುಗುಣವಾಗಿ ಬೇಡನ್‌ಪೊವೆಲ್ ಹತ್ತು ಹಲವು ನೀತಿ ನಿಯಮಗಳನ್ನು ನೀಡಿದ್ದಾರೆ. ಅವುಗಳ ಸದ್ಬಳಕೆಯಾದಾಗ ಮಗುವಿನ ಉಜ್ವಲ ಪ್ರತಿಭೆ ಬೆಳೆಯುತ್ತದೆ. ಮನದಾಳದಲ್ಲಿ ಶಿಸ್ತು, ಅಂತರಂಗ ಶುದ್ಧಿ ಮೊಳಕೆಯೊಡೆಯುತ್ತದೆ.

ಹೃದಯಾಂತರಾಳದ ಆಸೆ ಹೊರಹೊಮ್ಮಿಸುವ ದಾರಿ ಇದರಿಂದ ಮೂಡುತ್ತದೆ. ಬುಲ್ ಬುಲ್‌ನಲ್ಲಿ ಪಾಠದೊಂದಿಗೆ ಆಟ, ನೃತ್ಯ, ನಾಟಕಗಳಿಗೆ ಹೆಚ್ಚು ಒತ್ತು ಕೊಡುವುದರಿಂದ ಅವಳಲ್ಲಿರುವ ಪ್ರತಿಭೆಯನ್ನು ಪ್ರದರ್ಶಿಸುವ ಅವಕಾಶ ಸಿಗುತ್ತದೆ. ಇಂದಿನ ನಾಗರಿಕರಲ್ಲಿ ಕೆಟ್ಟ ಹವ್ಯಾಸಗಳಿಗೆ ಬಲಿಯಾಗುತ್ತಾ ವಿನಾಶದ ಛಾಯೆ ಎಲ್ಲೆಲ್ಲೂ ಕಾಣತೊಡಗಿದೆ. ಆದರೆ ಬುಲ್ ಬುಲ್ ತನ್ನ ಉತ್ತಮ ನಡತೆಯಿಂದ ಹಲವಾರು ದುಷ್ಟ ಚಟಗಳಿಂದ ದೂರ ಉಳಿಯುತ್ತದೆ.

ಬೆಳೆಯುವ ಸಿರಿ ಮೊಳಕೆಯಲಿ ಎಂಬಂತೆ ನಾವು ಇಂತಹ ಸಂಘಟನೆಯನ್ನು ಬೆಳೆಸಬೇಕು, ಮಕ್ಕಳ ಮೂಲಕ ಬೆಳಗಿಸಬೇಕು, ಶಾಲೆ ಎಂಬುದೊಂದು ನೀಲಾಕಾಶವಿದ್ದಂತೆ. ಮಕ್ಕಳೆಲ್ಲಾ ಮಿನುಗುವ ನಕ್ಷತ್ರಗಳಾದರೆ ಶಿಕ್ಷಕರು, ತಮ್ಮೆಲ್ಲಾ ಅರಿವನ್ನು ಧಾರೆಯೆರೆದು ಅವರ ಬಾಳ ಬೆಳಗುವ ಸೂರ್ಯನಂತೆ, ಪೋಷಕರು ಪ್ರೀತಯೆಂಬ ಬೆಳದಿಂಗಳ ಸುರಿದು ಪೋಷಿಸುವ ಚಂದ್ರರಂತೆ, ಈ ನಕ್ಷತ್ರಗಳು ಬೆಳಗಲು ಸ್ವಪ್ರಕಾಶ ಪಡೆಯಲು ಬುಲ್ ಬುಲ್ ಅಂತಹ ಸಂಘಟನೆಯಲ್ಲಿ ಭಾಗವಹಿಸಬೇಕು.

ಸರಿಯಾದ ಮಾರ್ಗದಲ್ಲಿ ಸಾಗಿ ಜೀವನದಲ್ಲಿ ಯಶಸ್ಸನ್ನು ಗಳಿಸಬೇಕು ಎಂಬುದ ಸ್ಕೌಟ್ - ಗೌಡ್ ಸಂಸ್ಥೆಯ ಆಸೆ. ಸ್ಕೌಟ್-ಗೈಡ್ ಸಂಸ್ಥೆಗೆ ಅಳಿಲ ಸೇವೆಯನ್ನು ಸಲ್ಲಿಸುತ್ತಾ ಸಾಮಾಜಿಕ ಬದುಕಿನಲ್ಲಿ ಕಾರ್ಯೋನ್ಮುಖವಾಗಿರಬೇಕೆಂಬುದು ನನ್ನಾಸೆ.

# ಚಿಕ್ಕಮಗಳೂರು ಜಿಲ್ಲಾಪರಿಚಯ

ಬೆಳವಾಡಿಮಂಜುನಾಥ

ಕರ್ನಾಟಕದಲ್ಲಿ ಚಿಕ್ಕಮಗಳೂರು ಜಿಲ್ಲೆ ಒಂದು ವಿಶಿಷ್ಟ ಸ್ಥಾನ ಪಡೆದಿದೆ. ಮಲೆನಾಡು, ಅರೆಮಲೆನಾಡು, ಬಯಲುಸೀಮೆಯ ಭೌಗೋಳಿಕ ಹಿನ್ನೆಲೆಯನ್ನು ಹೊಂದಿದ್ದು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಿರುವುದು ಇಲ್ಲಿನ ಹಿರಿಮೆ. ಜಿಲ್ಲೆಯ ಪ್ರಾಕೃತಿಕ ಸಂಪತ್ತು ಎಷ್ಟು ಸಮೃದ್ಧವಾದುದೋ ಇಲ್ಲಿನ ಜನರ ಹೃದಯವಂತಿಕೆ, ಆತಿಥ್ಯ ಕೂಡ ಆದರ್ಶ ಪ್ರಾಯವಾದುದು. ಕಲೆ, ಸಾಹಿತ್ಯ, ಸಂಗೀತ, ಕ್ರೀಡೆ, ರಾಜಕಾರಣ ಮೊದಲಾದ ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಮುನ್ನಡೆ ಸಾಧಿಸಿ ರಾಷ್ಟ್ರಕ್ಕೆ ಅಮೂಲ್ಯ ಕೊಡುಗೆಯನ್ನಿತ್ತಿರುವ ಚಿಕ್ಕಮಗಳೂರು ಜಿಲ್ಲೆ ಪೌರಾಣಿಕವಾಗಿ, ಐತಿಹಾಸಿಕವಾಗಿ ಕೂಡ ಪ್ರಸಿದ್ಧವಾಗಿದೆ.

ನಿಸರ್ಗದತ್ತವಾದ ನಿತ್ಯ ಹರಿದ್ವರ್ಣಕಾಡುಗಳು, ಜೀವ ನದಿಗಳು, ಘಟ್ಟ ಪ್ರದೇಶಗಳು, ಸಮೃದ್ಧ ಬೆಳೆಯ ಹಸುರು, ಕಾಫಿಯ ಕಂಪು, ತೆಂಗುಕಂಗಿನ ತಂಪು, ಏಲಕ್ಕಿಯ ಸುಗಂಧ ಹೀಗೆ ಸೊಬಗಿನ ಆಗರವಾದ ಚಿಕ್ಕಮಗಳೂರು ಎಂಥವರನ್ನೂ ಆಕರ್ಷಿಸುತ್ತದೆ. ಧಾರ್ಮಿಕ, ಸಾಹಿತ್ಯಕ ಸಿರಿವಂತಿಕೆ ನಾಡಿನ ಗಮನ ಸೆಳೆದಿದೆ. ಪ್ರಕೃತಿಯ ಆಡಂಬೊಲವಾದ ಈ ಜಿಲ್ಲೆ ೧೮೬೫ ರಲ್ಲಿ ಅಸ್ತಿತ್ವಕ್ಕೆ ಬಂದು ಶತಮಾನೋತ್ಸವದ ಸಂಭ್ರಮವನ್ನು ಕಳೆದು ಮುನ್ನಡೆದಿದೆ.

'ಚಿಕ್ಕಮಗಳೂರು' ಎಂಬ ಸ್ಥಳನಾಮದ ವಿಶೇಷತೆ ಅನನ್ಯವಾದದು. ''ಕಿರಿಯ ಮುಗುಳಿ'' ಎಂಬ ಉಲ್ಲೇಖವಿದ್ದು ಅದರಿಂದಲೇ ಈ ಹೆಸರು ಬಂದಿರಬೇಕೆಂಬ ಐತಿಹಾಸಿಕ ಸಂಭಾವ್ಯತೆ ಅರ್ಥಪೂರ್ಣವಾದುದು. 'ಮುಗುಳಿ' ಎಂಬುದು ಒಂದು ಸಸ್ಯದ ಹೆಸರು. 'ಕಿರಿಯ ಮುಗುಳಿ' ಎಂಬ ಶಬ್ಧ ಆಡುಮಾತಿನ ಸೌಲಭ್ಯಾಕಾಂಕ್ಷೆಯಿಂದಾಗಿ ಚಿಕ್ಕಮುಗಳಿ ಎಂದಾಗಿದ್ದು, ಊರು ಎಂಬ ಸ್ಥಳ ನಿರ್ದೇಶನ ಬೆಸೆದು 'ಚಿಕ್ಕಮಗಳೂರು' ಆಗಿರಬೇಕು. ಅದನ್ನು ಸಮರ್ಥಿಸುವಂತೆ ಸನಿಹದಲ್ಲೇ ಇರುವ ಹಿರೇಮಗಳೂರು, 'ಪಿರಿಯ ಮುಗುಳಿ' ಎಂಬುದಾಗಿದೆ. ಆದರೆ ಪೌರಾಣಿಕವಾಗಿ ಬೇರೆ ರೀತಿಯಲ್ಲಿ ಸ್ಥಳನಾಮವನ್ನು ಅರ್ಥೈಸಲಾಗಿದೆ. ಅದೊಂದು ಐತಿಹ್ಯ! ಸಖರಾಯಪಟ್ಟಣದ ಅರಸ ರುಕ್ಮಾಂಗದ ತನ್ನ ಕಿರಿಯ ಮಗಳಿಗೆ ಬಳುವಳಿಯಾಗಿ ನೀಡಿದ ಊರೇ ಚಿಕ್ಕಮಗಳ ಊರು - ಚಿಕ್ಕಮಗಳೂರು ಎಂದೂ, ಹಿರಿಯ ಮಗಳಿಗೆ ನೀಡಿದ ಊರು ಹಿರೇಮಗಳೂರು ಎಂಬುದಾಗಿದೆ. ಈ ಐತಿಹ್ಯ ಮಹಾಭಾರತದ ಕಥೆಯೊಂದನ್ನು ಆಧರಿಸಿದೆ.

ಗಂಗರು ೯ನೆಯ ಶತಮಾನದಲ್ಲಿ ಚಿಕ್ಕಮಗಳೂರಿನಲ್ಲಿ ನಿರ್ಮಿಸಿದ್ದರೆನ್ನಲಾಗಿರುವ ಕೋಟೆ ಇದ್ದ ಸ್ಥಳದಲ್ಲಿ ದೊರೆತಿರುವ ಶಾಸನದಲ್ಲಿ 'ಕಿರಿಯಮುಗುಳಿ' ಹೆಸರಿದೆ. ಈ ಬಗೆಯ ಸಸ್ಯಕೂಡ ಪತ್ತೆಯಾಗಿದ್ದು ಅದೇ ಸ್ಥಳದ ನಾಮವಿಶೇಷಣಕ್ಕೆ ಪ್ರೇರಕವಾಗಿದೆ.

ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಅತಿ ಎತ್ತರವಾದ ಘಟ್ಟ ಸಾಲನ್ನು ಹೊಂದಿದ್ದು ದಕ್ಷಿಣ ಕನ್ನಡ ಜಿಲ್ಲೆಯಿಂದ ಚಿಕ್ಕಮಗಳೂರು ಜಿಲ್ಲೆಯನ್ನು ಬೇರ್ಪಡಿಸಿದೆ. ಜಿಲ್ಲೆಯ ಮಧ್ಯದಲ್ಲಿ ಹಾದು ಹೋಗುವ ಬೆಟ್ಟಸಾಲು ಅನೇಕ ಶಿಖರಗಳಿಂದ ಕೂಡಿದೆ. ಇದು ದೊನ್ನೆಯ ಆಕೃತಿಯಲ್ಲಿ ಕಂಡು ಬರುತ್ತಿದ್ದು, ಚಂದ್ರದ್ರೋಣ ಪರ್ವತವೆಂದೂ ಇಲ್ಲಿ ಅನೇಕ ನದಿಗಳು, ಝರಿಗಳು ಹುಟ್ಟಿ ಹರಿಯುವುದರಿಂದ ಜಲಮೇಲು ಪರ್ವತವೆಂದೂ ಕರೆಯಲಾಗುತ್ತಿದೆ. ರಾಮಾಯಣದಲ್ಲಿ ಲಕ್ಷ್ಮಣ ಯುದ್ಧದಲ್ಲಿ ಮೂರ್ಛೆ ಹೋದಾಗ ಆಂಜನೇಯ ಸಂಜೀವಿನಿ ಮೂಲಿಕೆಗಾಗಿ

ಈ ಪರ್ವತವನ್ನೇ ಹೊತ್ತೊಯ್ದು ಹಿಂದಕ್ಕೆ ತಂದಿರಿಸಿದ್ದು 'ಸಂಜೀವಿನಿ ಪರ್ವತ' ಎಂಬ ಹೆಸರನ್ನು ಪಡೆದಿದೆ. ರಾಜ್ಯದಲ್ಲೇ ಎತ್ತರವಾದ ಮುಳ್ಳಯ್ಯನ ಗಿರಿ ( ೬೩೧೭ ಅಡಿ) ಇಲ್ಲಿದೆ. ಇದರೊಂದಿಗೆ ದತ್ತಾತ್ರೇಯಪೀಠ, ಕಲ್ಲತ್ತಿಗಿರಿ ಬೆಟ್ಟ ಸಾಲು ಕೂಡ ಮುಖ್ಯವಾಗಿವೆ.

ಈ ಜಿಲ್ಲೆಯಲ್ಲಿ ಹಲವು ನದಿಗಳು ಹುಟ್ಟಿ ಹರಿಯುತ್ತವೆ. ಪಶ್ಚಿಮಘಟ್ಟಗಳ ಮಧ್ಯದ ವರಾಹ ಪರ್ವತದ 'ಗಂಗಾಮೂಲ' ಎಂಬಲ್ಲಿ ಕುದುರೆಮುಖ ಬೆಟ್ಟಸಾಲುಗಳಿದ್ದು ತುಂಗಾ ಮತ್ತು ಭದ್ರಾ ನದಿಗಳು ಹುಟ್ಟುತ್ತವೆ. ನೇತ್ರಾವತಿ ನದಿಯ ಉಗಮ ಸ್ಥಳ ಕೂಡ ಇದೇ ಆಗಿದ್ದೂ ದಕ್ಷಿಣ ಕನ್ನಡಜಿಲ್ಲೆಗೆ ಹರಿಯುತ್ತದೆ. ಮೂಡಿಗೆರೆ ಸಮೀಪದ ಜಾವಳಿಯಲ್ಲಿ ಉದಯಿಸುವ ಹೇಮಾವತಿ ನದಿ ಹಾಸನದತ್ತ ಸಾಗುತ್ತದೆ. ಸೀತಾಳಯ್ಯನ ಗಿರಿಯಲ್ಲಿ ಯಗಚಿ ಹುಟ್ಟಿ ಬೇಲೂರು ಮೂಲಕ ಗೊರೂರಿನಲ್ಲಿ ಹೇಮಾವತಿಯನ್ನು ಸೇರುತ್ತದೆ. ವೇದಾ ಮತ್ತು ಆವುತಿ ನದಿಗಳು ಬಾಬಾಬುಡನ್ ಗಿರಿಯಲ್ಲಿ ಹುಟ್ಟುತ್ತವೆ. ಕಡೂರು ಮೂಲಕ ಚಿತ್ರದುರ್ಗದತ್ತ ಹರಿದಿವೆ. ಝರಿಗಳು, ಅಯ್ಯನಕೆರೆ, ಮದಗದಕೆರೆ, ಬೆಳವಾಡಿ ಕೆರೆ, ಇತಿಹಾಸ ಪ್ರಸಿದ್ಧವಾಗಿವೆ. ನರಸಿಂಹರಾಜಪುರದ ಸನಿಹದ ಹಬ್ಬೆ, ಕೆಮ್ಮಣ್ಣು ಗುಂಡಿಯ ಕಲ್ಹತ್ತಿ ಜಲಾಶಯಗಳು ಪ್ರಖ್ಯಾತವಾಗಿದ್ದು ಸಾವಿರಾರು ಎಕರೆ ಜಮೀನಿಗೆ ನೀರುಣಿಸುತ್ತಿವೆ.

ಚಿಕ್ಕಮಗಳೂರು ಜಿಲ್ಲೆ ಕಡೂರು, ತರೀಕೆರೆ, ಶೃಂಗೇರಿ, ಮೂಡಿಗೆರೆ, ಕೊಪ್ಪ, ನರಸಿಂಹರಾಜಪುರ ಹಾಗೂ ಚಿಕ್ಕಮಗಳೂರು ಎಂಬ ಏಳು ತಾಲ್ಲೂಕು ಕೇಂದ್ರಗಳನ್ನೊಳಗೊಂಡಿದೆ. ಕಡೂರು, ತರೀಕೆರೆ ತಾಲ್ಲೂಕು ಬಯಲುಸೀಮೆಯಾಗಿದ್ದು ತೆಳುವಾದ ಅರಣ್ಯ ಭಾಗಗಳಿವೆ. ಚಿಕ್ಕಮಗಳೂರು ತಾಲ್ಲೂಕು ಅರೆಮಲೆನಾಡು, ಉಳಿದ ನಾಲ್ಕು ತಾಲ್ಲೂಕುಗಳು ಮಲೆನಾಡು ಪ್ರದೇಶವಾಗಿದ್ದು ದಟ್ಟವಾದ ಕಾಡನ್ನು ಒಳಗೊಂಡಿವೆ. ೪೯೨ ಚದರ ಕಿ.ಮೀ. ವಿಸ್ತೀರ್ಣವಿರುವ ಭದ್ರಾ ಅಭಯಾರಣ್ಯ ಜಿಲ್ಲೆಯ ಹೆಮ್ಮೆಯ ತಾಣ, ಕೆಸವೆ, ಕಲ್ಹತ್ತಿ, ಕೆಮ್ಮಣ್ಣುಗುಂಡಿ ಹಾಗೂ ಕೌಲಾಪುರಗಳಲ್ಲಿ ಅರಣ್ಯಧಾಮಗಳಿವೆ. ತೇಗ ಮತ್ತಿ, ಬೀಟೆ, ಹೊನ್ನೆ ಶ್ರೀಗಂಧದ ಮರಗಳನ್ನೂ, ಬಿದಿರು, ಬೆತ್ತವನ್ನು ಒಳಗೊಂಡಿವೆ.

ಏಲಕ್ಕಿ, ಕಾಫಿ, ಟೀ, ಮೆಣಸು, ತೆಂಗು, ಅಡಿಕೆ, ರಾಗಿ, ಕಬ್ಬು, ಜೋಳ, ಎಳ್ಳು, ಶೇಂಗಾ, ಭತ್ತ, ಜಿಲ್ಲೆಯ ಪ್ರಮುಖ ಬೆಳೆಗಳು. ಹಿತಕರವಾದ ವಾತಾವರಣವಿದ್ದು ಅಪರೂಪದ ಪಕ್ಷಿ ಸಂಕುಲ ಹಾಗೂ ಕಾಡೆಮ್ಮೆ, ಜಿಂಕೆ, ಕಾಡುಹಂದಿ, ತೋಳ, ನರಿ, ಮೊಲ, ಆನೆ, ಮೊದಲಾದ ಪ್ರಾಣಿ ಸಮೂಹವನ್ನು ಹೊಂದಿರುವುದು ವಿಶೇಷ. ಜಿಲ್ಲೆಯ ಮುಖ್ಯ ಕಸುಬು ಕೃಷಿ ಮತ್ತು ಪ್ಲಾಂಟೇಷನ್. ಜಿಲ್ಲೆಯಲ್ಲಿ ಕಬ್ಬಿಣದ ಅದಿರು ಮ್ಯಾಂಗನೀಸ್, ಗ್ರಾಫೈಟ್, ಗ್ರಾನೈಟ್ ಹಾಗೂ ಸುಣ್ಣ ಕಲ್ಲು ಲಭ್ಯವಿದೆ. ಕುದುರೆಮುಖದ ಕಬ್ಬಿಣ ನಿಕ್ಷೇಪ ಏಷ್ಯಾದಲ್ಲೇ ದೊಡ್ಡದೆನ್ನಿಸಿದೆ. ಇದು ಜಿಲ್ಲೆಯ ಏಕೈಕ ಬಹೃತ್ ಕೈಗಾರಿಕೆ ಕೂಡ.

ಸಾಂಸ್ಕೃತಿಕವಾಗಿ ಚಿಕ್ಕಮಗಳೂರು ಕರ್ನಾಟಕದಲ್ಲಿ ದಿಟ್ಟ ಹೆಜ್ಜೆಯನ್ನಿರಿಸಿದೆ. ಇಲ್ಲಿನ ಶಾಸನ ಸಂಪತ್ತು ಅಗಾಧವಾಗಿದ್ದು ಸುಮಾರು ೯೫೦ ಶಾಸನಗಳು ಲಭ್ಯ ಇವೆ. ಇದರಲ್ಲಿ ಸುಮಾರು ೩೫೦ ಶಾಸನಗಳು ಹೊಯ್ಸಳರಿಗೆ ಸಂಬಂಧಿಸಿದ್ದಾಗಿವೆ. ದಾನ ಶಾಸನಗಳೇ ಅಧಿಕವಾಗಿದ್ದು ಸುಮಾರು ೧೪೦೦ ವರ್ಷಗಳ ಇತಿಹಾಸ (ಕ್ರಿ.ಶ. ೪೫೦ ರಿಂದ ೧೮೧೧) ವನ್ನು ದಾಖಲಿಸಿವೆ. ಕನ್ನಡ ಸಾಹಿತ್ಯದಲ್ಲೇ ಮೊದಲ ಶಾಸನವೆಂದು ನಿರ್ಧರಿಸಿರುವ ಹಲ್ಮಿಡಿಶಾಸನ ಚಿಕ್ಕಮಗಳೂರು ಸಮೀಪದ ಹಲ್ಮಿಡಿಯದ್ದಾಗಿದೆ. ಅದರಲ್ಲಿ ''ಪಲ್ಮಿಡಿಯುಂ ಮೂಳಿವಳ್ಳಿಯುಂ'' ಎಂಬ ಉಲ್ಲೇಖವಿದೆ ಮೂಳಿವಳ್ಳಿ ಇಂದಿನ ಮುಗುಳುವಳ್ಳಿ ಆಗಿರಬಹುದು. ಕದಂಬರ ಎರಡು ಶಾಸನಗಳು ಸೇರಿದಂತೆ ಗಂಗರು, ಸಾಂತಾರರು, ಸೇನಾವಾರರು, ಚಾಳುಕ್ಯರು, ಚೋಳರು, ಹೊಯ್ಸಳರು, ವಿಜಯನಗರದಅರಸರು, ಕೆಳದಿನಾಯಕರು ಮೊದಲಾದ ರಾಜವಂಶಗಳ ಶಾಸನಗಳಿವೆ. ಶೃಂಗೇರಿ ಜಾಗೀರಿಗೆ ಸಂಬಂಧಿಸಿದಂತೆ ನಾಗರಿಲಿಪಿಯ ತಾಮ್ರದ ೪೦ ಶಾಸನಗಳಿವೆ. ದತ್ತಾತ್ರೇಯ ಪೀಠದ ಸುತ್ತ ನಾಲ್ಕು ಪರ್ಷಿಯನ್ ಶಾಸನಗಳು ಸಿಕ್ಕಿವೆ. ವೀರಗಲ್ಲು, ಮಾಸ್ತಿ ಕಲ್ಲು ಹಿರೇಮಗಳೂರಿನ ಯೂಪಶಾಸನ, ಸಲ್ಲೇಖನವ್ರತದಿಂದ ಸಮಾಧಿ ಮರಣ ಹೊಂದಿದ ಜೈನಮುನಿಗಳ ನೆನಪಿನ ನಿಸಿದಿಕಲ್ಲುಗಳು ಲಭ್ಯವಿದ್ದು ಜಿಲ್ಲೆಯ ಸಾಂಸ್ಕೃತಿಕ ಔನ್ನತ್ಯದ ಚರಿತ್ರಾಧಾರಗಳಾಗಿವೆ.

ಕರ್ನಾಟಕದಲ್ಲಿ ಮೊಟ್ಟ ಮೊದಲು ಸ್ವತಂತ್ರರಾಜ್ಯ ಕಟ್ಟಿದ ಕದಂಬ ವಂಶದ ಕಾಕುಸ್ಥವರ್ಮನ ಕಾಲದಲ್ಲಿ ಈ ಜಿಲ್ಲೆ ಸುದೀರ್ಘ ಆಳ್ವಿಕೆಗೆ ಒಳಗಾಗಿತ್ತು. ಇವರ ಸಾಮಂತರಾದ ಗಂಗರಿಗೆ ಕಡೂರು ತಾಲ್ಲೂಕಿನ ನಗರದ ಕೋಟೆಯ ಭಾಗ ಪ್ರಮುಖ ನೆಲೆಯಾಗಿದ್ದು ಹಿರೇಮಗಳೂರು ಅಗ್ರಹಾರವಾಗಿದ್ದಿತು. ಸಾಂತಾರರು ಮೂಡಿಗೆರೆ ತಾಲ್ಲೂಕಿನ ಕಳಸದಲ್ಲಿ ರಾಜಧಾನಿ ಕೇಂದ್ರವನ್ನು ಸ್ಥಾಪಿಸಿದ್ದನ್ನು

ಮರೆಯುವಂತಿಲ್ಲ. ಚಾಳುಕ್ಯರು, ರಾಷ್ಟ್ರಕೂಟರು, ವಿಜಯನಗರ, ಕೆಳದಿನಾಯಕರ ಆಳ್ವಿಕೆಯಲ್ಲಿ ಜಿಲ್ಲೆ ವಿಶೇಷವಾಗಿ ಬೆಳೆದು ಬಂದಿದೆ. ಧರ್ಮ, ಸಂಸ್ಕೃತಿಯ ಸಮನ್ವಯ ಸಾಧಿಸುವಲ್ಲಿ ಚಿಕ್ಕಮಗಳೂರು ಜಿಲ್ಲಾ ಭಾಗದ ಹಲವು ಪ್ರದೇಶಗಳು ಮಹತ್ವವೆನ್ನಿಸಿವೆ.

ಹೊಯ್ಸಳರು ಮೂಲತಃ ಇದೇ ಜಿಲ್ಲೆಯವರು. ಮೂಡಿಗೆರೆ ತಾಲ್ಲೂಕಿನ ಅಂಗಡಿ (ಸೊಸೆವೂರು) ಅವರ ರಾಜ್ಯ ಸ್ಥಾಪನಾಕೇಂದ್ರ ಮತ್ತು ರಾಜಧಾನಿಕೂಡ. ಹೊಯ್ಸಳರ ಕೊನೆಯ ಕಾಲದವರಗೆ (೧೩೪೨) ಈ ಜಿಲ್ಲೆ ರಾಜ್ಯದ ಅವಿಭಾಜ್ಯ ಅಂಗವಾಗಿದ್ದಿತು. ಕಲ್ಯಾಣ ಕ್ರಾಂತಿಯಾದಾಗ ಶರಣರು ಇಲ್ಲಿಯ ಉಳಿವೆಮಲೆಗೆ ಬಂದು ಆಶ್ರಯ ಪಡೆದುದನ್ನು ಇತಿಹಾಸ ಸಾರುತ್ತದೆ. ಭದ್ರಾನದಿಯ ದಡದ ಸಂಗಮೇಶ್ವರಪೇಟೆ ಅವರಿಗೆ ನೆಲೆಯಾಯಿತು.

ಶೃಂಗೇರಿ ಪೀಠದ ಗುರುಗಳಾಗಿದ್ದ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕ ಶಕ್ತಿಯಾಗಿದ್ದರು. ತರೀಕೆರೆ ಕೆಳದಿ ಐಗೂರು ಪಾಳೇಗಾರರು ಈ ನೆಲವನ್ನು ಆಳಿದ್ದಾರೆ. ಮೈಸೂರು ಒಡೆಯರು, ಹೈದರಲಿ, ಟಿಪ್ಪು ಈ ಜಿಲ್ಲೆಗೆ ನೀಡಿದ ಕೊಡುಗೆ ಮಹತ್ವದ್ದು. ೧೬೯೪ರ ವೇಳೆಗೆ ಮೈಸೂರು ರಾಜ್ಯ ಚಿಕ್ಕಮಗಳೂರಿನವರೆಗೂ ವಿಸ್ತರಿಸಿದ್ದಿತು. ೧೭೯೯ರಲ್ಲಿ ಮೈಸೂರು ಒಡೆಯರು ಪುನಃ ಅಧಿಕಾರ ಪಡೆದಾಗ ಅವರಿಗೆ ಒಪ್ಪಿಸಿದ ರಾಜ್ಯದ ಭಾಗದಲ್ಲಿ ಈ ಜಿಲ್ಲೆ ಸೇರಿತ್ತು. ೧೮೬೩ರ ವೇಳೆಗೆ ಕಮೀಷನರ ಆಳ್ವಿಕೆಯಲ್ಲಿ ಕಡೂರು ಜಿಲ್ಲಾ ಕೇಂದ್ರವಾಗಿ ಪರಿಗಣಿತವಾಯಿತು. ೧೮೮೬ರಲ್ಲಿ ಚಿಕ್ಕಮಗಳೂರು ಜಿಲ್ಲೆ ಈಗಿರುವ ಏಳು ತಾಲ್ಲೂಕುಗಳನ್ನೊಳಗೊಂಡ ಸ್ವರೂಪ ಪಡೆಯಿತು.

ಸ್ವಾತಂತ್ರ್ಯ ಹೋರಾಟದಲ್ಲೂ ಚಿಕ್ಕಮಗಳೂರು ಜಿಲ್ಲೆಯ ಪ್ರಭಾವ ದೊಡ್ಡದು. ಹೊಸಕೊಪ್ಪ ಕೃಷ್ಣರಾಯರ ಹಿರಿತನದಲ್ಲಿ ಜಿಲ್ಲೆಯಲ್ಲಿ ರಾಜಕೀಯ ಜಾಗೃತಿ ಮೂಡಿತು. ಹರಿಹರಪುರದಲ್ಲಿ ರಾಜಕೀಯ ಸಮ್ಮೇಳನ ನಡೆಯಿತು. ೧೯೨೭ರಲ್ಲಿ ಗಾಂಧೀಜಿ ಚಿಕ್ಕಮಗಳೂರು, ಕಡೂರಿಗೆ ಭೇಟಿನೀಡಿದ್ದರ ಫಲವಾಗಿ ಸ್ವಾತಂತ್ರ್ಯ ಹೋರಾಟದ ಪಡೆಯೇ ಸಿದ್ಧವಾಯಿತು. ೧೯೪೨ರ "ಬ್ರಿಟಿಷರೇ ಭಾರತಬಿಟ್ಟು ತೊಲಗಿ" ಚಳವಳಿ ತೀವ್ರ ಸ್ವರೂಪ ಪಡೆಯಿತು. ೧೯೫೨ರಲ್ಲಿ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆದಾಗ ಹಾಸನ-ಚಿಕ್ಕಮಗಳೂರು ಸೇರಿ ಲೋಕ ಸಭಾ ಕ್ಷೇತ್ರವಾಯಿತು. ೧೯೬೭ರಲ್ಲಿ ಕ್ಷೇತ್ರಗಳ ಮರುವಿಂಗಡಣೆಯಾಯಿತು. ೧೯೭೮ರಲ್ಲಿ ಕೊಪ್ಪದ ಐತಿಹಾಸಿಕ ಸಮ್ಮೇಳನದ ತೀರ್ಮಾನದಂತೆ ಇಂದಿರಾಗಾಂಧಿ ಅವರಿಗೆ ರಾಜಕೀಯದ ಮರುಹುಟ್ಟನ್ನು ಜಿಲ್ಲೆ ನೀಡಿತು. ಇಡೀ ರಾಷ್ಟ್ರದ ಗಮನ ಸೆಳೆದಿರುವ ಚಿಕ್ಕಮಗಳೂರು ರಾಜಕಾರಣದಲ್ಲೂ ತನ್ನದೇ ಆದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ.

ಸಾಹಿತ್ಯ ಕ್ಷೇತ್ರಕ್ಕೆ ಚಿಕ್ಕಮಗಳೂರು ಜಿಲ್ಲೆಯ ಕಾಣಿಕೆ ಗಣನೀಯವಾದುದು. ಕಾಲ, ಪ್ರದೇಶದ ವ್ಯಾಪ್ತಿಯನ್ನು ಮೀರಿ ಅದು ವಿಸ್ತೃತಗೊಂಡಿದೆ. ಶಾಸನಗಳಿಂದ ಮೊದಲ್ಗೊಂಡು ಇಂದಿನವರೆಗೆ ಸಮೃದ್ಧವಾಗಿ ಬೆಳೆದು ಬಂದಿದೆ. ಬ್ರಾಹ್ಮಣ ಮೊದಲ ಕವಿಯಾದ ರುದ್ರಭಟ್ಟ, ಹೊಯ್ಸಳರ ಎರಡನೆಯ ವೀರಬಲ್ಲಾಳನ ಆಸ್ಥಾನ ಕವಿಯಾಗಿದ್ದನು. ಈತ ೧೮ ಆಶ್ವಾಸಗಳ ಚಂಪೂ ಶೈಲಿಯ, ಜಗನ್ನಾಥವಿಜಯ, ಎಂಬ ಗ್ರಂಥ ರಚಿಸಿದ್ದಾನೆ. 'ರಸಕಲಿಕೆ' ಎಂಬ ಆಲಂಕಾರಿಕ ಕೃತಿ ರಚಿಸಿದ್ದನೆಂಬ ಪ್ರತೀತಿ ಇದ್ದರೂ ಅದು ಲಭ್ಯವಿಲ್ಲ!

ಉಪಮಾಲೋಲ ಲಕ್ಷ್ಮೀಶ ಜಿಲ್ಲೆಯ ಮಹತ್ವದ ಕವಿ. ನಾದಲೋಲ, ಕವಿಚೂತವನಚೈತ್ರ ಬಿರುದಿನ ಲಕ್ಷ್ಮೀಶ ಕಡೂರು ತಾಲ್ಲೂಕಿನ ದೇವನೂರಿನವನಾಗಿದ್ದು "ಕನ್ನಡಜೈಮಿನಿ ಭಾರತ" ಕಾವ್ಯದ ಕರ್ತೃವಾಗಿದ್ದಾನೆ. ವೀರ, ಶೃಂಗಾರ, ಭಕ್ತಿ, ರಸಪ್ರಧಾನವಾದ ೩೪ ಸಂಧಿಗಳ ಈ ಕಾವ್ಯ ೧೯೦೭ ವಾರ್ಧಕ ಷಟ್ಪದಿಗಳಿಂದ ಕೂಡಿದ್ದು ಗುಣ-ಗಾತ್ರದಲ್ಲೂ ಹಿರಿದಾಗಿದೆ. ಬಾಹುಬಲಿಕವಿ, ರಾಮಚಂದ್ರಗುರು ಮೊದಲಾದಾದವರು ಈ ಜಿಲ್ಲೆಯ ಕವಿಗಳೆಂದೇ ನಂಬಿಕೆ. ಜಿಲ್ಲಾ ಶಾಸನ ಕವಿಗಳಾದ ಜನ್ನ, ಅರ್ಹದ್ಭಕ್ತ, ಮಲ್ಲಿನಾಥ, ನಾಗದೇವ, ದಾಮೋದರ, ಜೊಂಬಣ್ಣ ಪಂಡಿತ, ಗೋವಿಂದ ಮೊದಲಾದವರು ಚಿಕ್ಕಮಗಳೂರು ಜಿಲ್ಲೆಯ ಸಂಪರ್ಕ ಪಡೆದ ಕವಿಗಳು.

ಆಧುನಿಕ ಸಾಹಿತ್ಯದ ಅಶ್ವಿನಿದೇವತೆಗಳಲ್ಲಿ ಒಬ್ಬರೆನ್ನಿಸಿಕೊಂಡಿರುವ ಡಾ. ಎ. ಆರ್. ಕೃಷ್ಣಶಾಸ್ತ್ರೀ ಅವರು ಸಮೀಪದ ಅಂಬಳೆಯವರು. ಕನ್ನಡ, ಸಂಸ್ಕೃತ, ಇಂಗ್ಲಿಷ್, ಬಂಗಾಳಿ ಭಾಷೆಯಲ್ಲಿ ವಿದ್ವಾಂಸರಾಗಿದ್ದು ಗದ್ಯ ಹಾಗೂ ಗ್ರಂಥ ಸಂಪಾದನಾಶಾಸ್ತ್ರಕ್ಕೆ ಹೊಸ ಆಯಾಮ ಮೂಡಿಸಿದವರು. ಬಂಕಿಮಚಂದ್ರ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಪಡೆದವರಾಗಿದ್ದಾರೆ.

ಮಹಾಕಾವ್ಯ ಬರೆದಿರುವ ಮಲ್ಲಿಕಾಕಡಿದಾಳ್, ಕಾಶಿವಿಶ್ವನಾಥಶೆಟ್ಟಿ, ಕೇಂದ್ರ ಸಾಹಿತ್ಯ ಅಕಾಡೆಮಿ ಹಾಗೂ ಪಂಪಪ್ರಶಸ್ತಿ ಪಡೆದಿರುವ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಇಲ್ಲಿ ನೆಲೆಸಿದವರು. ಕಾದಂಬರಿಕಾರ ತ.ಪು. ವೆಂಕಟರಾಮ್, ಸಣ್ಣಕಥೆಗಳ ಅಶ್ವತ್ಥ ಆನಂದ ಅಧ್ಯಾತ್ಮ ಗ್ರಂಥಗಳ ಸವ್ಯಸಾಚಿ, ರತ್ನಾಕರಭಟ್ಟ ಇಲ್ಲಿಯವರು. ಸಂಶೋಧಕರಾದ ಡಾ. ಎಂ.ಪಿ. ಮಂಜಪ್ಪಶೆಟ್ಟಿ ಡಾ. ಕೆ. ಎಲ್. ಗೋಪಾಲಕೃಷ್ಣಯ್ಯ, ಡಾ. ಡಿ. ಎಸ್. ಜಯಪ್ಪಗೌಡ, ಡಾ. ಗಂಗಾನಾಯಕ್, ಡಾ. ಬಿ. ಎಂ. ಪುಟ್ಟಯ್ಯ, ಡಾ. ತರೀಕೆರೆ ರೆಹಮತ್, ಡಾ. ಸುಮತೀಂದ್ರ ನಾಡಿಗ್ ಡಾ. ರಾಜಪ್ಪದಳವಾಯಿ ಮೊದಲಾದವರು ನಾಡಿನ ವಿವಿಧ ಭಾಗಗಳಲ್ಲಿ ನೆಲೆಸಿದ್ದರೂ ಮೂಲತಃ ಚಿಕ್ಕಮಗಳೂರು ಜಿಲ್ಲೆಯವರು.

ರಾಷ್ಟ್ರಕವಿ ಕುವೆಂಪು ಅವರಿಗೆ ಜನ್ಮನೀಡಿದ ಹಿರೇಕೂಡಿಗೆ ಕೊಪ್ಪ ತಾಲ್ಲೂಕಿಗೆ ಸೇರಿದೆ. ಬಿ.ಟಿ. ಲಲಿತಾನಾಯಕ್, ಗೊ.ರು. ಚನ್ನಬಸಪ್ಪ, ದಾಶರಥಿ ದೀಕ್ಷಿತ್, ಮಾಕೋನಹಳ್ಳಿ ದೊಡ್ಡಪ್ಪಗೌಡ, ಡಾ. ಕೆ. ಮರುಳುಸಿದ್ದಪ್ಪ, ಕೆ. ಆರ್. ಲಿಂಗಪ್ಪ ಲಲಿತಾಂಬ ವೃಷಭೇಂದ್ರ ಸ್ವಾಮಿ ಹಿರೇಮಗಳೂರು ಕಣ್ಣನ್, ಅಜ್ಜಂಪುರ ಜಿ. ಸೂರಿ, ಕೆ. ಓಂಕಾರಪ್ಪ, ಕೆ. ಎಂ. ರೇವಣ್ಣ ಜಯಾಯಾಜಿ ಚಂದ್ರಶೇಖರ ನಾರಣಾಪುರ, ಎಚ್. ಎಸ್. ಸೂರ್ಯನಾರಾಯಣ, ಕಡೂರು ರಂಗನಾಥ್, ಶಾರದಾ ಉಳುವೆ, ಚಂದ್ರಯ್ಯನಾಯ್ಡು ಡಾ. ಟಿ. ಎಂ. ಬಾಲಗಣಪತಿ, ಹೆರೂರುಮೆನನ್, ಬಿ. ಜಯಮ್ಮ ಮೊದಲಾದವರ ಬಹುಮುಖ ಪ್ರತಿಭೆಯ ಸಾಹಿತ್ಯ ಕೃಷಿಯಿಂದ ಜಿಲ್ಲೆಯ ಸಾಹಿತ್ಯವಲಯ ಸಮೃದ್ಧಗೊಂಡಿದೆ. ಸಾಂಸ್ಕೃತಿಕ ಸಂಪನ್ನತೆ ದಾಖಲಾಗಿದೆ.

ಧಾರ್ಮಿಕ ಜಾಗೃತಿಯನ್ನು ಮೂಡಿಸುವುದರೊಂದಿಗೆ ಪವಿತ್ರ ಕ್ಷೇತ್ರಗಳಾಗಿ ಪ್ರವಾಸಿತಾಣವಾಗಿ ರೂಪುಗೊಂಡಿರುವ ಜಿಲ್ಲೆಯ ಮಹತ್ವದ ಸ್ಥಳಗಳು ಅನೇಕ. ಒಂದು ಕಾಲದಲ್ಲಿ ಜೈನಧರ್ಮ ಇಲ್ಲಿ ಅತ್ಯಂತ ವೈಭವದಿಂದ ಮೆರೆದಿರಬೇಕೆಂಬುದಕ್ಕೆ ಲಭ್ಯವಿರುವ ಜಿನಬಿಂಬಗಳು, ಬಸದಿಗಳು, ಶಾಸನಗಳು ಸಾಕ್ಷಿಯಾಗಿವೆ. ಅದ್ವೈತ ತತ್ವವನ್ನು ಜಗತ್ತಿಗೆ ಸಾರಿದ ತುಂಗಾನದಿಯ ದಡದಲ್ಲಿರುವ ಶೃಂಗೇರಿ ಪರಂಪರೆಯ ನೆಲೆ. ಆದಿ ಶಂಕರಾಚಾರ್ಯರಿಂದ ಸ್ಥಾಪಿತವಾದ ಶಾರದಾಪೀಠದಲ್ಲಿರುವ ಶ್ರೀ ವಿದ್ಯಾಶಂಕರ ದೇವಾಲಯ ದ್ರಾವಿಡ ಹಾಗೂ ಮಿಶ್ರಶೈಲಿಯ ಸುಂದರ ಶಿಲ್ಪವಾಗಿದೆ. ಭದ್ರಾ ನದಿಯ ಸನಿಹದಲ್ಲಿರುವ ಶ್ರೀಮದ್ರಂಭಾಪುರಿ ಮಠ, ಪಂಚಾಚಾರ್ಯರಲ್ಲಿ ಮೊದಲಿಗರಾದ ಶ್ರೀ ರೇಣುಕಾಚಾರ್ಯರ ಸನ್ನಿಧಿಯಾಗಿದೆ, ತುಂಗಾನದಿ ಬಳಿಯಲ್ಲಿ ಸ್ಮಾರ್ತರ ಹರಿಹರಪುರ ಮಠವಿದೆ. ಕೂದುವಳ್ಳಿ ಸಮೀಪದ ಗೌತಮೇಶ್ವರ ಅಹಲ್ಯೆಯ ಶಾಪವಿಮೋಚನೆಗೊಂಡ ಸ್ಥಳ. ಇದು ಗೌತಮ ಋಷಿಯ ಆಶ್ರಮವಾಗಿದ್ದು ಇಲ್ಲಿ ಹೊಯ್ಸಳ ಮಾದರಿಯ ದೇವಾಲಯವಿದೆ. ಮೃಕುಂಡ ಮುನಿಯು ತಪಸ್ಸು ಮಾಡಿದ ಖಾಂಡ್ಯದಲ್ಲಿ ಮಾರ್ಕಂಡೇಶ್ವರ ದೇಗುಲವಿದೆ. ದಕ್ಷಿಣಕಾಶಿ ಎಂದೇ ಪ್ರಸಿದ್ಧವಾದ ಕಳಸದಲ್ಲಿ ಶ್ರುತಬಿಂದು ರಾಜ ಕಟ್ಟಿಸಿದ ಕಳಸೇಶ್ವರ ದೇವಾಲಯವಿದೆ. ಸಮೀಪದ ಹೊರನಾಡಿನಲ್ಲಿರುವ ಅನ್ನಪೂರ್ಣೇಶ್ವರಿ ದೇವಾಲಯದ ಮಹಿಮೆ ಪ್ರಖ್ಯಾತವಾದುದು. ಪರಶುರಾಮ ತನ್ನ ಕೊಡಲಿಯ ಕೊನೆ ರಕ್ತದ ಹನಿಯನ್ನು ತೊಳೆದನೆಂದು ನಂಬಲಾಗಿರುವ ಸೋಮಪುರದಲ್ಲಿ ದಕನ್ನಿನ ಹೊಯ್ಸಳ ಮಾದರಿಯ ಸೋಮೇಶ್ವರ ದೇವಾಲಯವಿದೆ.

ಚಿಕ್ಕಮಗಳೂರು ತಾಲ್ಲೂಕಿನ ಬೆಳವಾಡಿ, ಮರ್ಲೆ, ಅಂಬಳೆ, ತರೀಕೆರೆಯ ಸಮೀಪದ ಅಮೃತಾಪುರ, ಬಗ್ಗವಳ್ಳಿಗಳಲ್ಲಿ ಸುವಿಖ್ಯಾತ ಹೊಯ್ಸಳ ದೇವಾಲಯಗಳಿವೆ. ದತ್ತಾತ್ರೇಯ ಪೀಠ, ಬಾಬಾಬುಡನ್‌ಗಿರಿ ಬೆಟ್ಟ ಹಿಂದೂ-ಮುಸ್ಲಿಂ ಭಾವೈಕ್ಯತೆಯ ಸಂಕೇತವಾಗಿದೆ. ತರೀಕೆರೆ ಸಮೀಪದ ವಚನಕಾರ ನುಲಿಯ ಚಂದಯ್ಯನ ಗದ್ದುಗೆ, ತುರುವನಹಳ್ಳಿಯ ಗುರುನಿರ್ವಾಣಸ್ವಾಮಿ ಮಠ, ಶಿರವಾಸೆಯ ಪರದೇಸಪ್ಪನ ಬೆಟ್ಟ, ದೊಡ್ಡ ಕುರುಬರ ಹಳ್ಳಿಯ ಜಾಬಲಾಪುರಿಮಠ, ಜೈನಾಚಾರ್ಯರ ತಪಸ್ಸಿಗೆ ಪ್ರಸಿದ್ಧವಾದ ಸಿಂಹನಗದ್ದೆಯಲ್ಲಿ ಮೂರು ಬಸದಿ ಮಠಗಳಿದ್ದು ಆಸ್ತಿಕರು ಪ್ರವಾಸಿಗರ ಗಮನ ಸೆಳೆದಿವೆ. ಸದ್ಭಾವನೆಯ ದ್ಯೋತಕವಾಗಿ ಧಾರ್ಮಿಕ ನೆಲೆಗಳಾಗಿವೆ.

ಜಿಲ್ಲೆಯ ಸಾಂಸ್ಕೃತಿಕ, ಸಾಮಾಜಿಕ ಕಾಳಜಿಯಿಂದಾಗಿ ವಿವಿಧ ಸುಸಂಘಟಿತ ಸಂಘ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದು ಕ್ರಿಯಾಶೀಲವಾಗಿವೆ. ಜಿಲ್ಲೆಯ ಹಿರಿಯ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು, ಕಲಾಸೇವಾ ಸಂಘ, ಬೀರೂರಿನ ಕನ್ನಡ ಸಂಘ, ಕಲಾಸೇವಾಸಂಘ, ಬೀರೂರಿನ ಕನ್ನಡ ಯುವಕ ಸಂಘ, ಜಿಲ್ಲಾ ಲೇಖಕರ ಸಂಘ, ಸಾಂಸ್ಕೃತಿಕ ಸಂಘ, ಸುಗಮ ಸಂಗೀತಗಂಗಾ, ರಂಗಶ್ರೀ, ಡಾ. ರಾಜಕುಮಾರ್ ಅಭಿಮಾನಿಗಳ ಸಂಘ ಮೊದಲಾದವುಗಳ ಜತೆಗೆ ಮಂಡಳಿಗಳು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿವೆ.

ಕ್ರೀಡಾಕ್ಷೇತ್ರದ ಅಭಿವೃದ್ಧಿಗಾಗಿ ೧೯೪೦ರ ವೇಳೆಗೆ ಆರಂಭವಾದ ಅಜ್ಜಂಪುರದ ನೇತಾಜಿ ವ್ಯಾಯಾಮಶಾಲೆ,

ಬೀರೂರಿನ ಶಿವಾಜಿ ವ್ಯಾಯಾಮಶಾಲೆ, ಕಡೂರಿನ ಡೆಕನ್ ಸ್ಪೋರ್ಟ್ಸ್‌ಕ್ಲಬ್, ಚಿಕ್ಕಮಗಳೂರಿನ ಸ್ಪೋರ್ಟ್ಸ್‌ಕ್ಲಬ್, ವಾಲಿಬಾಲ್ ಅಸೋಸಿಯೇಷನ್, ರಾಣಾ ಸ್ಪೋರ್ಟ್ಸ್‌ಕ್ಲಬ್ ಮೊದಲಾದ ಹಿರಿಯ ಕ್ರೀಡಾ ಸಂಘಗಳ ಸಾಧನೆ ದೊಡ್ಡದು. ಈ ಸಂಘಗಳು ಕ್ರೀಡೆಗೆ ನೀಡಿದ ಉತ್ತೇಜನ, ಏರ್ಪಡಿಸಿರುವ ಸ್ಪರ್ಧೆಗಳು ಬಹಳ.

ಸಮಾಜಸೇವೆಗೆಂದು ಕಟಿಬದ್ಧವಾಗಿರುವ ರೋಟರಿ, ಲಯನ್ಸ್, ಜೇಸಿಸ್, ಸ್ಕೌಟ್ ಮತ್ತು ಗೈಡ್ಸ್, ಸೇವಾದಳ, ಪರಿಸರ ಜಾಗೃತಿ ವೇದಿಕೆ, ನೇಚರ್ ಕನ್ಸರ್‌ವೇಷನ್ ಗಿಲ್ಡ್ ಮಹಿಳಾ ಜಾಗೃತಿ ಸಂಘ, ದಲಿತ ಸಂಘರ್ಷ ಸಮಿತಿ ಮೊದಲಾದ ಸಂಘ ಸಂಸ್ಥೆಗಳ ಸೇವೆ ಅನನ್ಯವಾಗಿದೆ. ಜಿಲ್ಲೆಯಲ್ಲಿ ವಿವಿಧ ಬಗೆಯ ಅಭಿವೃದ್ಧಿ ಕಾರ್ಯಗಳು ನಡೆದಿವೆ. ಮತೀಯ ಸಂಘಗಳು, ಕಾರ್ಮಿಕ ಸಂಘಗಳು, ಶೈಕ್ಷಣಿಕ ಸಂಸ್ಥೆಗಳ ಕೊಡುಗೆ ಸೇರಿದೆ.

ಕಲೆಯ ಆಗರವಾದ ಚಿಕ್ಕಮಗಳೂರು ಜಿಲ್ಲೆ ನಾಟಕ, ಚಲನಚಿತ್ರ, ಸಂಗೀತ, ಚಿತ್ರಕಲೆ, ಜನಪದ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದೆ. ಇಪ್ಪತ್ತನೆಯ ಶತಮಾನದ ಮಧ್ಯ ಭಾಗದಲ್ಲೇ ಶ್ರೀಸಿದ್ದೇಶ್ವರ, ಬಸವೇಶ್ವರ, ಮಲ್ಲೇಶ್ವರ ಕೃಪಾ ಪೋಷಿತ ನಾಟಕ ಮಂಡಳಿಗಳು ರಚನಾತ್ಮಕವಾದ ರಂಗಭೂಮಿಯನ್ನು ಅಣಿಗೊಳಿಸಿದ್ದವು. ರಂಗಶ್ರೀ, ಶಿಲ್ಪಶ್ರೀ. ನ.ರಾ. ಪುರದ ಸಪ್ತಶ್ರೀ ಹವ್ಯಾಸಿ ಕಲಾವೃಂದ, ಕಲಾಸೇವಾ ಸಂಘ ಮೊದಲಾದ ಸಂಘಗಳೇ ಅಲ್ಲದೆ ವೈಯುಕ್ತಿಕ ಆಸಕ್ತಿಯಿಂದ ಬೆಳೆದು ಬಂದ ರಂಗವೇದಿಕೆಯ ಕೊಡುಗೆ ದೊಡ್ಡದ್ದು.

ಚಲಚನಚಿತ್ರ ಕ್ಷೇತ್ರದಲ್ಲಿ ಎಂ. ಕೆ. ಬಾಲಾಜಿ ಸಿಂಗ್ ಅವರ ಹಲವು ಪ್ರಸಿದ್ಧ ಚಿತ್ರಗಳನ್ನು ರೂಪಿಸಿವೆ. ತೇಜಸ್ವಿ ಅವರ ಕೃತಿಗಳು ಚಲನಚಿತ್ರಕ್ಕೆ ಕಥೆ ಒದಗಿಸಿವೆ. ಛಾಯಚಿತ್ರ ಕ್ಷೇತ್ರದಲ್ಲಿ ಪೂರ್ಣಚಂದ್ರತೇಜಸ್ವಿ, ಡಾ. ರವೀಶ್ ಕಾಸರವಳ್ಳಿ ಮೊದಲಾದವರು ಸುವಿಕ್ಯಾತರಾಗಿದ್ದಾರೆ. ವ್ಯಂಗ್ಯ ಚಿತ್ರದಲ್ಲಿ ಕಡೂರುದತ್ತಾತ್ರಿ, ನಾಗರಾಜ್, ದಯಾನಂದ, ಚಂದ್ರಶೇಖರ್, ರಾಜಶೇಖರ್ ಇವರ ಶ್ರೇಯಸ್ಸನ್ನು ಮರೆಯುವಂತಿಲ್ಲ. ಸಂಗೀತ, ಗಮಕ ಚಿತ್ರಕಲೆಯಲ್ಲೂ ಜಿಲ್ಲೆ ವಿಶಿಷ್ಟ ಸ್ಥಾನಮಾನ ಪಡೆದಿದೆ.

ಜನಪದ ಕ್ಷೇತ್ರಕ್ಕೆ ಜಿಲ್ಲೆಯ ಕೊಡುಗೆ ಅಮೂಲ್ಯವಾದುದು. ಜನಪದ ಸಾಹಿತ್ಯದಲ್ಲಿ ಗೀತೆ. ಲಾವಣಿ, ಕತೆ, ಒಗಟು, ಗಾದೆ, ವಿಪುಲವಾಗಿ ಲಭ್ಯವಿದೆ. ಕೆ. ಆರ್. ಲಿಂಗಪ್ಪನವರು ಸಂಗ್ರಹಿಸಿರುವ ಮಾನವಮಿ ಪದಗಳು, ಗೊರುಚ ಅವರ ಸಂಪಾದನೆಯ ಗ್ರಾಮಗೀತೆಗಳು ಮಹತ್ವದ ಪ್ರಕಟಣೆಗಳು. ೧೯೬೭ ರಲ್ಲಿ ರಾಜ್ಯದಲ್ಲೇ ಮೊದಲ ಬಾರಿಗೆ ತರೀಕೆರೆಯಲ್ಲಿ ಜರುಗಿದ ಅಖಿಲ ಕರ್ನಾಟಕ ಜನಪದ ಸಾಹಿತ್ಯ ಸಮ್ಮೇಳನ ಹಾಗೂ ಈ ಸಂದರ್ಭದಲ್ಲಿ ಹೊರತಂದ 'ಹೊನ್ನಬಿತ್ತೇವು ಹೊಲಕೆಲ್ಲ' ಗ್ರಂಥ ಅಭೂತಪೂರ್ವವಾದುದು. ಜಿಲ್ಲೆಯ ಕೋಲಾಟ ಹಾಗೂ ವೀರಗಾಸೆ ರಾಜ್ಯದಲ್ಲೇ ಹೆಸರುಮಾಡಿರುವ ಕಲೆಗಳಾಗಿವೆ. ಸೋಮನ ಕುಣಿತ, ಲಂಬಾಣಿ ಕುಣಿತ, ಸುಗ್ಗಿಕುಣಿತ ಇವೆಲ್ಲ ಜಿಲ್ಲೆಯ ಜನಪದ ಸಂಪತ್ತಿನ ಕವಲುಗಳು.

ಪತ್ರಿಕಾರಂಗಕ್ಕೆ ಕೂಡ ಜಿಲ್ಲೆಯ ಕೊಡುಗೆ ದೊಡ್ಡದು. ಸ್ವಾತಂತ್ರ್ಯ ಪೂರ್ವದಲ್ಲಿ ದಿ ಹಿಂದೂ, ಸ್ವರಾಜ್ಯ ಪತ್ರಿಕೆಗಳನ್ನು ತರಿಸಿಕೊಂಡು ಓದುವ ಕೆಲವರಿಗೆ ಸೀಮಿತಗೊಂಡಿತ್ತು. ೧೯೩೩ ರಲ್ಲಿ ಸಮುದ್ರವಳ್ಳಿ ಎಸ್. ಸುಬ್ಬರಾಯರು 'ತಾಯಿನಾಡು' ಪತ್ರಿಕೆಯ ವರದಿಗಾರರಾಗಿ ಕಾರ್ಯ ಆರಂಭಿಸಿದರು. ೧೯೬೨ ರಲ್ಲಿ ಜಿಲ್ಲೆಯ ಪ್ರಪ್ರಥಮ ದೈನಿಕ 'ಗಿರಿವಾರ್ತೆ' ಆರಂಭಗೊಂಡಿತು. ನಂತರ ಜನಮಿತ್ರ, ಹೊಸದಿಗಂತ, ಮಲೆನಾಡುಸಂಗತಿ, ಸುದ್ದಿಮಾಧ್ಯಮ, ಮಲೆನಾಡು ನಕ್ಷತ್ರ, ಜಿಲ್ಲಾ ಸಮಾಚಾರ, ವರದಿಗಾರ, ಸುದ್ದಿಗಾರ, ಜನಪತ್ರಿಕೆ, ಗೆಳೆಯ, ಶಿರೋರತ್ನ ಮೊದಲಾದ ಪತ್ರಿಕೆಗಳು ಜಿಲ್ಲಾ ಮಟ್ಟದಲ್ಲಿ ಜನರ ಅಭಿಪ್ರಾಯವನ್ನು ಬಿಂಬಿಸುತ್ತಾ ಜಿಲ್ಲಾ ಅಭಿವೃದ್ಧಿಗಾಗಿ ದುಡಿಯುತ್ತಿವೆ. ರಾಜ್ಯಮಟ್ಟದ ಪತ್ರಿಕೆಗಳು ತಾಲ್ಲೂಕು ವ್ಯಾಪ್ತಿಯ ಪತ್ರಿಕೆಗಳು ಜಿಲ್ಲೆಯಲ್ಲಿ ಕಾರ್ಯನಿರತವಾಗಿವೆ.

ಚಿಕ್ಕಮಗಳೂರು ಜಿಲ್ಲೆಯ ಪರಂಪರೆಯನ್ನು ಅವಲೋಕಿಸಿದಾಗ ಸಮೃದ್ಧವಾಗಿ ಬೆಳೆದು ಬಂದಿರುವುದು ಸುವ್ಯಕ್ತಗೊಳ್ಳುತ್ತದೆ. ಕಾರಣಾಂತರದಿಂದ ಕೈಗಾರಿಕಾ ಕ್ಷೇತ್ರದಲ್ಲಿ ವಿಶೇಷ ಮುನ್ನಡೆ ಕಾಣದಿದ್ದರೂ ಕೃಷಿ ಹಾಗೂ ಸಾಂಸ್ಕೃತಿಕ ಸಿರಿವಂತಿಕೆ ನಾಡಿಗೆ ಮಾದರಿಯಾಗಿದೆ, ಅದರ ಸ್ವರೂಪ, ಬೆಳವಣಿಗೆಯನ್ನು ಕಟ್ಟಿ ಕೊಡುವುದು ಸಾಮಾನ್ಯ ಸಂಗತಿಯಲ್ಲ. ಇದೊಂದು ಸ್ಥೂಲ ನೋಟವಷ್ಟೇ! ಎಷ್ಟೋ ಅಂಶಗಳು ಇಲ್ಲಿ ದಾಖಲಾಗಿಲ್ಲ ! ಹೇಳಿರುವುದಕ್ಕಿಂತ ಉಳಿದಿರುವುದೇ ಹೆಚ್ಚು! ಅಂತಹ ಹಿರಿಮೆಯ ನೆಲೆ ಚಿಕ್ಕಮಗಳೂರು ಎಂಬುದು ಹೆಮ್ಮೆ ಪಡಬೇಕಾದ ಸಂಗತಿ.



# ಅಪೂರ್ವ ಸಂಗಮ

ಸುಧಾಶಾಸ್ತ್ರೀ. ಡಿ. ಆರ್.



ಅದೊಂದು ಅಪರೂಪದ ಕ್ಷಣ. ಸಂಭವಿಸುವುದೇ ಅಪರೂಪ. ಮಗ ತಂದೆಗೆ ಸ್ಕೌಟ್ ಕತ್ತಿನ ಚೌಕ ತೊಡಿಸಿದರೆ, ಅಜ್ಜ ಮಗ, ಮೊಮ್ಮಗ, ಮರಿಮಗ ಒಟ್ಟಾಗಿ ಸ್ಕೌಟ್ ಸಮವಸ್ತ್ರದಲ್ಲಿ ಕ್ಯಾಮರಾ ಎದುರಿಸದರು.

ನೂರಾಎರಡು ವಸಂತಗಳನ್ನು ಪೂರೈಸಿದರೂ, ತಮ್ಮ ನೆನಪಿನಂಗಳದಿಂದ ೧೯೩೦ರಲ್ಲಿ ಸ್ಕೌಟ್ ಸಂಸ್ಥಾಪಕ ಬೇಡನ್‌ಪೊವೆಲ್ ಅಂದಿನ ಮದ್ರಾಸಿಗೆ ಬಂದು ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಿದ್ದನ್ನು ಚಿಕ್ಕಮಗಳೂರು ನಗರದ ಹಿರಿಯ ನ್ಯಾಯವಾದಿ ಗಣೇಶ ಸುಂದರರಾವ್ ವಿವರಿಸಿದಾಗ ರೋಮಾಂಚನವಾಯಿತು!.

''ನಾನು ಸ್ಕೌಟ್ ಆಗಿ ಭಾಗವಹಿಸಿದ್ದಾಗ ಬಿ.ಪಿ. ಆ ಜಂಬೂರಿಗೆ ಬಂದಿದ್ದರು'' ಎಂದು ತಮ್ಮ ನೆನಪಿನ ಸುರಳಿ ಬಿಚ್ಚಿದ ಗಣೇಶ ಸುಂದರರಾವ್ ''ಆಗ ವಿಶ್ವ ಸಮರದ ಕಾಲ, ನಾವು ಸ್ಕೌಟ್ ಯೂನಿಫಾರಂ ತೊಟ್ಟು ಸ್ಕೌಟ್ ಚಟುವಟಿಕೆಯಲ್ಲಿ ಭಾಗವಹಿಸಿದಾಗ ಜನ ''ನಿಮ್ಮನ್ನು ಯುದ್ಧಕ್ಕೆ ಕರೆದುಕೊಂಡು ಹೋಗುತ್ತಾರೆ ನೋಡ್ತಾ ಇರಿ'' ಎಂದು ಹೇಳುತ್ತಿದ್ದುದನ್ನು ನೆನಪಿಸಿಕೊಂಡು ನಕ್ಕರು.

ಇಂದು ಗಣೇಶ ಸುಂದರರಾವ್ ಅವರಿಗೆ ೧೦೨ವರ್ಷ ಅವರಿಗೆ ಅವರ ಪುತ್ರ ದಿನಕರ್‌ರಾವ್ ಸ್ಕೌಟಿನ ಕಂಠ ವಸ್ತ್ರ ತೊಡಿಸಿ, ಓಗಲ್ ಹಾಕಿದರು. ನ್ಯಾಯವಾದಿ ಅನಿಲ್ ಸವೂರ್ ತಂದೆಗೆ ಸ್ಕಾರ್ಫ್ ಕಟ್ಟಿ ಓಗಲ್ ಹಾಕಿ ಅಪರೂಪದ ಛಾಯ ಚಿತ್ರಕ್ಕೆ ಸಿದ್ಧಪಡಿಸಿದರು. ಆ ವೇಳೆಗೆ ಅನಿಲ್ ಮಗ ೬ನೆಯ ತರಗತಿ ಓದುತ್ತಿರುವ, ಮಿಹಿರ್ ಸವೂರ್ ಸ್ಕೌಟ್ ಸಮವಸ್ತ್ರದಲ್ಲಿ ಸಿದ್ಧನಾದ. ಆ ವೇಳೆಗೆ ಅನಿಲ್ ಪತ್ನಿ ಯಾಮಿನಿ ಸವೂರ್ ಸಹ ಗೈಡ್ಸ್ ಸಮವಸ್ತ್ರ ಧರಿಸಿ ಹೊರಬಂದರು. ನಾಲ್ಕು ತಲೆಮಾರುಗಳ ಸ್ಕೌಟ್ ಕುಟುಂಬದವರ ಛಾಯಾಚಿತ್ರ ತೆಗೆದಾಗ ಮೋಡದಲ್ಲಡಗಿದ್ದ ಸೂರ್ಯಸಹ ಒಮ್ಮೆ ಇಣುಕಿ ಈ ಅಪೂರ್ವ ಸಂಗಮ ನೋಡಿ ಮರೆಯಾದ. ವಿಶೇಷವೆಂದರೆ ಅನಿಲ್ ಸಹೋದರ ನೇತ್ರ ವೈದ್ಯ ಡಾ. ಚೈತನ್ಯ ಸವೂರ್ ಸಹ ಸ್ಕೌಟ್. ಆದರೆ ಆ ಅಪರೂಪದ ಕ್ಷಣಕ್ಕೆ ಭಾಗಿಯಾಗಲು ಅವರು ಮನೆಯಲ್ಲಿರಲಿಲ್ಲ.

# ಬಾನಾಡಿಗಳ ಬಿನ್ನತ್ತಿ.....

ಸ. ಗಿರಿಜಾಶಂಕರ

ದೇವರು ರುಜು ಮಾಡಿದನು.
ರಸವಶನಾಗುತ ಕವಿ
ಅದ ನೋಡಿದನು..............

ಇದು ರಸಋಷಿ ಕುವೆಂಪು ಬಾನಂಗಳದಲ್ಲಿ ಹಕ್ಕಿಗಳ ಹಾರಾಟ ನೋಡಿ ಉದ್ಗರಿಸಿದಾಗ ಮೂಡಿ ಬಂದ ಕವನ. ನಿಸರ್ಗದ ಚೆಲುವನ್ನು ಹೆಚ್ಚಿಸಿದ, ಅದರ ಸ್ವಾಸ್ಥ್ಯ, ಸಮೃದ್ಧತೆಯನ್ನು ಕಾಪಾಡುವ ಪಕ್ಷಿಗಳು ಈ ಜೀವ ಪರಿಸರದ ಅತ್ಯಂತ ಮಹತ್ವದ ಎಳೆಗಳು. ನಮ್ಮ ನಡುವೆಯೇ ಬದುಕುವ, ನಮ್ಮ ಬದುಕಿಗೆ ಪೂರಕವಾಗಿ ತಮ್ಮ ಬದುಕನ್ನು ಸಾಗಿಸುತ್ತಾ ತಮ್ಮ ಮಧುರ ದನಿಯಿಂದ ಕಲರವದ ವಿಹಂಗಮದಿಂದ ನಮ್ಮ ಮನಸ್ಸಿಗೆ ಮುದ ನೀಡುತ್ತಿರುವ ಪಕ್ಷಿವಿಶ್ವದ ಒಳಹೊಕ್ಕಾಗ ಆಗುವ ಅನುಭವವೇ ಬೇರೆ. ಅದೊಂದು ವಿಸ್ಮಯ, ಕಾತರತೆಯ ಲೋಕ. ಶಿಸ್ತು, ಕರ್ತವ್ಯನಿಷ್ಠೆ ಜತೆಗೆ ಮೋಸ ವಂಚನೆಗೂ ಅವಕಾಶ ಇರುವ, ಬದುಕುವ ಅದಮ್ಯ ಉತ್ಸಾಹವಿರಿಸಿಕೊಂಡ ಜೀವಿಗಳ ಲೋಕವದು.

ಮೊನ್ನೆ ವಿರಾಮದಲ್ಲಿ ಪತ್ರಿಕೆ ಓದುತ್ತಿದ್ದ ನನಗೆ ಮಗ "ಬೇಗ ಬಾ ನೋಡು" ಎಂದು ಕೂಗಹತ್ತಿದ. ಸುದ್ದಿಯೊಂದರಲ್ಲಿ ಮಗ್ನನಾಗಿದ್ದ ನಾನು ಸಿಟ್ಟಿನಿಂದಲೇ ಎದ್ದು ಹೋಗಿ "ಏನೋ ಕೂಗಿಕೊಂಡೆ ಎಂದೆ". ಜೋರಾಗಿ ಮಾತನಾಡಬೇಡ, ನೋಡು ಅಚ್ಚ ನೀಲಿಯ ಹಕ್ಕಿ ಅದರ ಉದ್ದಕೊಕ್ಕು ನೋಡಿದ್ದೀಯ ಈ ಹಕ್ಕೀನ?" ಎಂದ.

ಹೌದು, ಅದು ಬಿಳಿಎದೆಯ ಮಿಂಚುಳ್ಳಿ, (White brested King Fisher) ಎಲ್ಲೋ ತಪ್ಪಿ ಈ ಕಡೆ ಬಂದಿದೆ ಎಂದೆ. ಅವನ ಪ್ರಶ್ನೆಗಳ ಮಳೆಯೇ ಸುರಿಯತೊಡಗಿತು. ಅದು ಎಲ್ಲಿರುತ್ತೆ.? ಅದರ ಆಹಾರವೇನು? ಮೊಟ್ಟೆ ಹೇಗಿಡುತ್ತೆ? ಸರಿ ಉತ್ತರಿಸತೊಡಗಿದೆ. ಈ ಮಿಂಚುಳ್ಳಿಗಳು ಅತ್ಯಂತ ತಜ್ಞ ಮೀನು ಶಿಕಾರಿ ಹಕ್ಕಿಗಳೆಂದು, ನೆಲದಲ್ಲಿ, ಗೆರೆಯ ಅಂಚುಗಳಲ್ಲಿ ಬಿಲತೋಡಿ ಮೊಟ್ಟೆ ಇಡುತ್ತವೆಂದು ಹೇಳಿದೆ. ಮಿಂಚುಳ್ಳಿ ಪ್ರಭೇದಗಳು ಬಹಳಷ್ಟಿದ್ದು, ವಿಶ್ವದಲ್ಲಿ ಎಂಬತ್ತೂ ಹೆಚ್ಚು ರೀತಿ ಮಿಂಚುಳ್ಳಿಗಳಿದ್ದು ಜಲಚರ ತಿಂದು ಕಾಲಹಾಕುವ ಈ ಹಕ್ಕಿ ಆ ನೀರಿನ ಮೂಲದ ಆರೋಗ್ಯದ ಅಳತೆಗೋಲು ಹೌದೆಂದು ಹೇಳಿ, ಸಲೀಮ್ ಅಲಿ ಅವರ 'ದಿ ಬುಕ್ ಆಫ್ ಇಂಡಿಯನ್ ಬರ್ಡ್ಸ್' ಪುಸ್ತಕ ತೆರೆದು ಹಲವು ಬಗೆಯ ಮಿಂಚುಳ್ಳಿಗಳನ್ನು ತೋರಿಸಿ, ನಮ್ಮ ಆಸುಪಾಸಿನಲ್ಲಿ ಸಿಗುವ ಕಪ್ಪು-ಬಿಳಿ ಮಿಂಚುಳ್ಳಿ, ಸಣ್ಣ ನೀಲಿ ಮಿಂಚುಳ್ಳಿ, ನಸುಗೆಂಪು ರೆಕ್ಕೆ ಮಿಂಚುಳ್ಳಿಗಳನ್ನು ತೋರಿಸಿದೆ.

ಅಂದು ಸಂಜೆ ಎಗಂಟೆ, ಮನೆಗೆ ಬಂದಿದ್ದ ತಮ್ಮನ ಮಗ ಚಿಕ್ಕಪ್ಪ ನೋಡಿ ಸಣ್ಣ ಗಿಳಿ ಎಂದು ಕೂಗಿದ. ನೋಡಿದಾಗ ಅದು ಗಿಳಿಯಾಗಿರದೆ ಒಂದು ನೊಣಹಿಡುಕ ವಾಗಿತ್ತು. ಅದಕ್ಕೆ ಆಂಗ್ಲಬಾಷೆಯಲ್ಲಿ Green Bee Eater ಎನ್ನುತ್ತಾರೆ. ಅವನಿಗೆ ತಿಳಿಹೇಳಿ, ಹಸುರಾಗಿದ್ದ ಮಾತ್ರಕ್ಕೆ ಅದು ಗಿಳಿಯಲ್ಲ-ಇದು ಬೇರೆ ಪಕ್ಷಿ ಎಂದೆ.

ಸಾಮಾನ್ಯವಾಗಿ ಕಾಣಸಿಗುವ ಹಸುರು ನೊಣಹಿಡುಕ ಬಹುಪಾಲು ಗುಬ್ಬಚ್ಚಿಯ ಗಾತ್ರವಿರುತ್ತದೆ. ರೆಕ್ಕೆ ಮತ್ತು ತಲೆ ಸ್ವಲ್ಪ ಕಂದು ಹಸುರಿಗೆ ತಿರುಗಿದ್ದು, ಕುತ್ತಿಗೆಯ ಬಳಿ ಸ್ವಲ್ಪ ಕಪ್ಪು ಬಣ್ಣವಿರುತ್ತೆ. ಉದ್ದ ಕೊಕ್ಕಿನ ಈ ಹಕ್ಕಿ ವಿದ್ಯುತ್ ತಂತಿಯ ಮೇಲೆ ಕುಳಿತಾಗ ರೆಕ್ಕೆಯಿಂದ ಎರಡು ಕಡ್ಡಿ ಹೊರಬಂದಂತೆ ಕಾಣುತ್ತೆ. ಹಾರುವ ಜೇನು ಇತರೆ ಹುಳಗಳನ್ನು ಹಾರುತ್ತಲೇ ಗುಳುಂ ಮಾಡುವ ಈ ಹಕ್ಕಿ ಉತ್ತಮ ಕೀಟನಾಶಕ ಹಕ್ಕಿ ಸಹ. ಸ್ವಲ್ಪ ಅರಣ್ಯ ಇರುವ ಪ್ರದೇಶಗಳಲ್ಲಿ ತಿಳಿಗೆಂಪು ತಲೆಯ ನೊಣಹಿಡುಕಗಳು ಕಾಣಸಿಗುತ್ತವೆ. ಸುಂದರವಾದ ಈ ಪಕ್ಷಿ ನೋಡಲು ಬಲುಚಂದ. ಗುಡ್ಡಗಳ ಅಂಚು ಕೆರೆಗಳಲ್ಲಿ ನೆಲದಲ್ಲೇ ಗೂಡು ಮಾಡುವ ನೊಣಹಿಡುಕಗಳಲ್ಲಿ ಮೊಟ್ಟೆಯಿಂದ ಮರಿ ಹೊರಬಂದೊಡನೆ ಗಂಡು ಹಾಗೂ ಹೆಣ್ಣು ಎರಡೂಪಕ್ಷಿಗಳು

ಆಹಾರತಂದು ಪೋಷಿಸುವ ಕೆಲಸದಲ್ಲಿ ತೊಡಗುತ್ತವೆ. ವಿಶೇಷವೆಂದರೆ ಇವೆರಡೂ ಹೊರಕ್ಕೆ ಹೋದಾಗ ಇದೇ ಜಾತಿಯ ದಾದಿ ಹಕ್ಕಿಯೊಂದು ಮರಿಗಳ ಪಾಲನೆಯಲ್ಲಿ ಸಹಕರಿಸುವುದು ಕಂಡುಬಂದಿದೆ.

ಒಮ್ಮೆ ರತ್ನಗಿರಿಬೋರೆಗೆ ನಡೆದು ಹೋಗುವಾಗ ಗೆಳೆಯ ಕಾಮತ್ ಜೋರಾಗಿ ಉದ್ಗರಿಸಿದರು. ನೋಡಿ ಮರಕುಟಿಗ ಎಂದು. ನೋಡಿದರೆ ಮರಕುಟುಗನಂತೆ ಉದ್ದಕೊಕ್ಕು, ತಲೆಯ ಮೇಲೆ ಮುಕುಟವಿರುವ ಜೀಬ್ರಾದೇಹದ ಮೇಲೆ ಇರುವ ಪಟ್ಟೆಗಳಂತೆ ಕಪ್ಪು-ಬಿಳಿ ಗೆರೆಗಳಿರುವ ಹಕ್ಕಿಕಂಡುಬಂತು. ನಾನು ತಕ್ಷಣ ಹೇಳಿದೆ ಇದು ಚಂದ್ರಮುಕುಟಹಕ್ಕಿ. ಆಂಗ್ಲ ಬಾಷೆಯಲ್ಲಿ ಇದನ್ನು Hoopoe ಎನ್ನುತ್ತಾರೆಂದು. ಸುಂದರವಾದ ಈ ಹಕ್ಕಿ ನೆಲೆದಲ್ಲೇ ಓಡಾಡುತ್ತಾ ಹರಿದಾಡುವ ಕೀಟಗಳನ್ನು ಭಕ್ಷಿಸುತ್ತಾ ಸಾಗುತ್ತಿರುತ್ತದೆ. ಏನಾದರೂ ಅಪಾಯ ಎದುರಾದರೆ ತಕ್ಷಣ ತನ್ನ ತಲೆಯಮೇಲಿನ ಜುಟ್ಟನ್ನು ಕೆದರಿ ಬೀಸಣಿಗೆಯಂತೆ ಮಾಡಿ ಇನ್ನಷ್ಟು ಸುಂದರ ನೋಟವನ್ನು ತೊರುತ್ತದೆ. ತಲೆಯ ಮೇಲೆ ಗುಂಡಗಿನ ಈ ಬೀಸಣಿಗೆ ಇರುವುದರಿಂದ ಇದಕ್ಕೆ ಚಂದ್ರಮುಕುಟಪಕ್ಷಿ ಎಂದು ಹೇಳುತ್ತಾರೆ. ಕೀಟಗಳ ಸಂಖ್ಯೆ ತಗ್ಗಿಸುವಲ್ಲಿ ಇದು ಸಹಕಾರಿ. ಇದು ಮನೆಯ ಮಾಡುಗಳಲ್ಲಿ ಹುಲ್ಲುಹಾಸಿನ ಗೂಡು ನಿರ್ಮಿಸುತ್ತದೆ. ಇದನ್ನು ಕಾಮತರಿಗೆ ಹೇಳಿ ನನ್ನ ಪಕ್ಷಿ ಪುರಾಣ ನಿಲ್ಲಿಸಿದೆ. ಸ್ವಲ್ಪ ಹೊತ್ತಿನಲ್ಲೇ ಕಪ್ಪು ಹಾಗೂ ಮಾಸಲುಗಪ್ಪಿನ ಎರಡು ಗುಬ್ಬಚ್ಚಿ ಗಾತ್ರದ ಹಕ್ಕಿಗಳು ಗೋಚರಿಸಿದವು. ಸರಿ ಮತ್ತೆ ಕಾಮತ್ ಆ ಹಕ್ಕಿನೋಡಿ ಎಂದರು. ಅವರ ಇಂಗಿತ ತಿಳಿದ ನಾನು ಅವು ರಾಬಿನ್ ಹಕ್ಕಿಗಳು, ಕಪ್ಪಗೆ ಹೊಳೆಯುತ್ತಿರುವುದು ಗಂಡು, ಮಾಸಲು ಬಣ್ಣದ್ದು ಹೆಣ್ಣೆಂದು ಹೇಳಿದೆ. ಇದೇ ರೀತಿ ಕಾಣುವ ಬೇಲಿಚಟಕ ಅಥವಾ Pied Bushchat ಬಗ್ಗೆ ಸಹ ವಿವರಿಸಬೇಕಾಯಿತು. ಈ ಎರಡೂ ಪ್ರಭೇದದ ಹಕ್ಕಿಗಳು ಸಿಳ್ಳು ಹಾಕುತ್ತವೆ. ವ್ಯತ್ಯಾಸವೆಂದರೆ ರಾಬಿನ್ ಹೊಟ್ಟೆಯ ಭಾಗದಲ್ಲಿ ಎರಡು ಬಿಳಿಗೆರೆ ಇರುವುದು ಸಾಮಾನ್ಯವಾದರೂ ರಾಬಿನ್‌ಗೆ ಪುಕ್ಕದ ಅಡಿ ನಸುಗೆಂಪು ಬಣ್ಣವಿದ್ದರೆ ಬೇಲಿಚಟಕಕ್ಕೆ ಬಿಳಿಬಣ್ಣವಿರುತ್ತದೆ. ಕೀಟ ಈ ಹಕ್ಕಿಗಳ ಮುಖ್ಯ ಆಹಾರ. ಇದೇರೀತಿ ಮನೆಗಳ ಪಕ್ಕದಲ್ಲೇ ಇರುವ ಹಕ್ಕಿ ಮಡಿವಾಳ ಸುವ್ವಿ ಅಥವಾ Magpie Robin ಅತ್ಯಂತ ಮಧುರವಾಗಿ ಹಾಡುವ ಈ ಹಕ್ಕಿಯ ಹೊಟ್ಟೆ ಪೂರ್ಣ ಬೆಳ್ಳಗಿದ್ದು ಕಪ್ಪು-ಬಿಳುಪು ಮಿಶ್ರಿತ ಹಕ್ಕಿ. ಸದಾ ಪುಕ್ಕವೆತ್ತಿ ಮರದ ತುದಿ, ಮಾಡಿನ ಮೇಲೆ ಕುಳಿತು ಹಾಡುತ್ತಾ ಹೆಣ್ಣು ಹಕ್ಕಿಯ ಜತೆಗೂಡಿ ಆಟವಾಡುತ್ತಿರುತ್ತದೆ. ಹೆಣ್ಣು ಹಕ್ಕಿ ಸ್ವಲ್ಪ ಮಾಸಲು ಬಣ್ಣವಿರುತ್ತದೆ. ಮನೆಯ ಮಾಡಿನ ಸಂದುಗಳಲ್ಲಿ ಮರದ ಸಣ್ಣ ರಂಧ್ರಗಳಲ್ಲಿ ಗೂಡು ಕಟ್ಟುತ್ತದೆ.

ನಮ್ಮ ಮನೆಯ ಹಿಂದೆ ಬಂದು ಟುವ್ವಿ ಟುವ್ವಿ ಎಂದು ತನ್ನ ಪುಕ್ಕವನ್ನು ಎತ್ತಿ ಕೂಗುತ್ತಾ ಕಿವಿಚಿಟ್ಟು ಹಿಡಿಸುತ್ತಿದ್ದ ಆಲೀವ್ ಹಸುರಿನ ಹಳದಿ ಬಿಳಿ ಮಿಶ್ರಿತ ಹೊಟ್ಟೆಹೊತ್ತ ಹಕ್ಕಿಬಗ್ಗೆ ಮಗನ ಗಮನ ಸೆಳೆಯಿತು. ಸರಿ ಆ ಹಕ್ಕಿಯ ಪುರಾಣ ಬಿಚ್ಚಲು ವರಾತ ಹಚ್ಚಿದ. ಗ್ರಾಮಾಂತರದಲ್ಲಿ ಸಿಗುವ ಇದೇ ರೀತಿ ಗಾತ್ರದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಇರುವುದು ದರ್ಜಿಹಕ್ಕಿ ಅಥವಾ ಟೈಲರ್ ಬರ್ಡ್. ಇನ್ನೊಂದು ಪಟ್ಟಣಗಳಲ್ಲೂ ಮನೆಯಂಗಣದಲ್ಲಿ ಕಾಣಸಿಗುವುದು ಬೂದುಬಣ್ಣದ ವಾರ್ಬ್ಲರ್ ಅಥವಾ Ashywren Warbler. ಇವೆರಡೂ ಸಿಂಪಿಗ ಹಕ್ಕಿಗಳು. ಮೊಟ್ಟೆ ಇಡುವ ಮುನ್ನ ಹೆಣ್ಣು ಹಕ್ಕಿ ದೊಡ್ಡ ಎಲೆಇರುವ ಮರದಲ್ಲಿ ಎಲೆಗಳನ್ನು ಜೋಡಿಸಿ ನಾರಿನಿಂದ ಹೊಲೆದು ಗೂಡು ನಿರ್ಮಿಸಿ ಒಳಗೆ ನಾರು ಹತ್ತಿ ಬಟ್ಟೆ ತುಂಡುಗಳನ್ನು ಹಾಕಿ ಹಾಸಿಗೆ ನಿರ್ಮಿಸಿ ಮೊಟ್ಟೆ ಇಟ್ಟು ಮರಿಮಾಡಿ ಸಾಕುತ್ತದೆ. ಕೀಟಗಳು ಇದರ ಆಹಾರ. ಈ ಹಕ್ಕಿಗಳೇ ದರ್ಜಿಗಳ ಮೊದಲ ಗುರುವಿರಬೇಕು. ಸದಾ ಪುಕ್ಕ ನಿಮಿರಿಸಕೊಂಡು ಚಿಟ್ಟುಹಿಡಿಸುವ ಹಾಗೆ ಕೂಗುತ್ತವೆ. ಗುಬ್ಬಚ್ಚಿಗಿಂತ ಗಾತ್ರದಲ್ಲಿ ಸಣ್ಣದು. ಇವು ಸದಾ ಚಟುವಟಿಕೆಯಲ್ಲಿ ನಿರತವಾಗಿರುವ ಹಕ್ಕಿಗಳು.

ಈ ರೀತಿ ವಿಶ್ವದಲ್ಲಿ ಅಂದಾಜು ೪೬೦೦ ಪ್ರಭೇದದ ಹಕ್ಕಿಗಳಿವೆ ಎಂದು ಪಕ್ಷಿ ತಜ್ಞರು ಗುರುತಿಸಿದ್ದು ಅದರಲ್ಲಿ ೧೨೦೦ ಪ್ರಭೇದದ ಹಕ್ಕಿಗಳು ಭಾರತ ಉಪಖಂಡದಲ್ಲೇ ದೊರೆಯುತ್ತವೆ. ಹಕ್ಕಿಗಳು ಕಾಡಿನ ಸೌಂದರ್ಯವನ್ನಷ್ಟೇ ಹೆಚ್ಚಿಸುವುದಿಲ್ಲ. ಅವು ಕೀಟ ಭಕ್ಷಕಗಳಾಗಿ ನಮ್ಮ ಆರೋಗ್ಯ ರಕ್ಷಣೆಯಲ್ಲಿ, ನಮ್ಮ ಬೆಳೆಗಳನ್ನುಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಬೀಜ ಪ್ರಸರಣದಿಂದ ಸಸ್ಯ ಸಮೃದ್ಧಿಗೂ ಕಾರಣವಾಗಿವೆ. ಜೈವಿಕ ಸರಪಳಿಯಲ್ಲಿ ಸೇರಿರುವ ಪಕ್ಷಿಗಳು ಮತ್ತು ಸಸ್ಯದ ನಂಟು ಪರಸ್ಪರಾವಲಂಬಿ ಪಕ್ಷಿಗಳಿಗೆ ಹಣ್ಣು ತನ್ನೊಳಗಡಗಿರುವ ಕೀಟಗಳನ್ನು ನೀಡುವಂತೆಯೇ ಆ ಸಸ್ಯ ಪ್ರಭೇದ ವೃದ್ಧಿಯಾಗಲು ಪರಾಗಸ್ಪರ್ಶ ಕ್ರಿಯೆಯಲ್ಲೂ ಹಕ್ಕಿಗಳ ಪಾತ್ರ ಅತ್ಯಂತ ಮಹತ್ವದ್ದು. ಕೆಲವೊಮ್ಮೆ ಒಂದು ಹಕ್ಕಿ ಒಂದು ಮರವನ್ನೇ ತನ್ನ ಬದುಕಿಗಾಶ್ರಯಿಸಿರುತ್ತೆ. ಆ ಮರದ ಸಾವು ಹಕ್ಕಿಯ ಅಂತ್ಯಕ್ಕೆ ಕಾರಣವಾಗಬಹುದು.

ಮಾರಿಷಸ್ ದ್ವೀಪದ ಡೋಡೋ ಹಾರಲಾರದ ಹಕ್ಕಿ. ಅಲ್ಲಿ ಬೆಳೆಯುತ್ತಿದ್ದ ಕ್ಯಾಲ್ವೇರಿಯಾ ಮೇಜರ್ ಮರಗಳನ್ನು ಆಶ್ರಯಿಸಿದ್ದವು. ಅವುಗಳ ಹಣ್ಣು ತಿಂದು ಅದರ ಬೀಜ ಹಕ್ಕಿಯ ಹೊಟ್ಟೆಯೊಳಗೆ ಮೆದುವಾಗಿ ಹಿಕ್ಕೆಯ ಜತೆ ಹೊರಬಂದಾಗ ನೆಲಕ್ಕೆ ಬಿದ್ದು ಅಲ್ಲಿ ಮೊಳೆತು ಮತ್ತೊಂದು ಮರದ ಸೃಷ್ಟಿಗೆ ಕಾರಣವಾಗುತ್ತಿತ್ತು. ಆದರೆ ಡೋಡೋ ಮುಗ್ಧ ಹಕ್ಕಿಗಳು ಅಂದು ಮಾರಿಷಸ್ ದ್ವೀಪದಲ್ಲಿ ಬಂದಿಳಿದ ನಾವಿಕರ ಆಹಾರದ ತಟ್ಟೆಗೆ ಸಾಗತೊಡಗಿ ೧೬ನೆಯ ಶತಮಾನದಲ್ಲಿ ನಾಶವಾದವು. ನಂತರ ಕ್ರಮೇಣ ಹೊಸ ಕ್ಯಾಲ್ವೇರಿಯಾ ಮೇಜರ್ ಮರಗಳು ಮತ್ತೆ ಹುಟ್ಟಲಿಲ್ಲ. ಅದರ ಬೀಜ ಯಾವ ರೀತಿ ಸಂಸ್ಕರಣ ವಿಧಾನದಲ್ಲೂ ಮೊಳೆಯಲಿಲ್ಲ, ಹಕ್ಕಿ ನಿರ್ನಾಮವಾದವು, ಮರವು ವಿನಾಶಕಂಡಿತು. ಈ ರೀತಿ ಸಂಬಂಧಗಳ ಅರಿವಿಲ್ಲದೆ ಹಕ್ಕಿಗಳನ್ನು ನಾಶಮಾಡುವ

ಮೂಲಕ ನಮ್ಮ ಬದುಕನ್ನು ಸ್ವಾಸ್ಥ್ಯದಿಂದ ಹಿಡಿದಿಟ್ಟ ಎಳೆಗಳನ್ನು ನಾಶಮಾಡುತ್ತಿದ್ದೇವೆ. ಎಲ್ಲಾ ಎಳೆಗಳು ತುಂಡಾದರೆ ನಮ್ಮನ್ನು ಹಿಡಿದಿಟ್ಟ ಬದುಕೇ ಈ ಸರಪಳಿಯಿಂದ ಬೇರ್ಪಟ್ಟು ನಾವೂ ನಾಶವಾಗುತ್ತೇವೆ, ಈ ಎಚ್ಚರ ನಮ್ಮಲ್ಲಿರಬೇಕು.

ಮಲೆನಾಡಿನಲ್ಲಿ ನಸುಗೆಂಪು ಬಣ್ಣದ ಮರಕುಟುಕವೊಂದಿದೆ. ಅದು ಗೂಡು ಕಟ್ಟುವುದು ಮರದ ಇರುವೆ ಗೂಡಿನಲ್ಲಿ, ಅತ್ಯಂತ ಉಪದ್ರವಿಯಾದ ಈ ಇರುವೆಗಳ ಹತ್ತಿರ ಯಾವ ಪ್ರಾಣಿ ಪಕ್ಷಿ ಮನುಷ್ಯರು ಸುಳಿಯರು. ಆದರೆ ಮೊಟ್ಟೆಯಿಡುವಾಗ ಈ ಪಕ್ಷಿ ಆ ಮರ ಇರುವೆ (Cremastogaster Ants) ಗೂಡಿಗೆ ಬಂದು ಒಂದು ಲೋಟದಾಕೃತಿಯಲ್ಲಿ ಕೊರೆದು, ಗೂಡು ನಿರ್ಮಿಸಿ ಮೊಟ್ಟೆಗಳನ್ನಿಡುತ್ತದೆ. ಆ ಇರುವೆಗಳು ಯಾವ ಜೀವಿಗಳನ್ನು ಹತ್ತಿರಸೇರಿಸಲಿಷ್ಟಪಡದಿದ್ದರೂ ಈ ಮರಕುಟಿಗ ಹಕ್ಕಿಗೆ ತನ್ನನ್ನೇ ಅರ್ಪಿಸಿಕೊಂಡು ನೆಲೆನೀಡಿ ಸಂತಾನ ಬೆಳೆಸಲು ಅನುವು ಮಾಡಿಕೊಡುತ್ತದೆ.

ಈ ರೀತಿಯ ಹಲವು ವಿಚಿತ್ರ ವಿಸ್ಮಯಗಳು ಈ ಬಾನಾಡಿ ಪ್ರಪಂಚದಲ್ಲಿವೆ. ಒಮ್ಮೆ ಅವುಗಳ ಅರಿವು ನಮಗಾದರೆ ಅವುಗಳ ಬಾಳ್ವೆ ನಮ್ಮ ಬದುಕಿಗೆ ಬೆಳಕಾಗಬಹುದು. ನಿಸರ್ಗದ ಅತ್ಯಂತ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳುವ ಮನಸ್ಸು ನಮಗಿರಬೇಕು. ಅದನ್ನು ಎಳೆಯ ಮನಸ್ಸುಗಳಿಗೆ ವರ್ಗಾಯಿಸಿ ಅವರ ಕುತೂಹಲವನ್ನು ಆ ಕಡೆಗೆ ತಿರುಗಿಸಬೇಕು. ಒಮ್ಮೆ ಸಸ್ಯ ಮತ್ತು ಪ್ರಾಣಿಯ ಬದುಕು ಅರ್ಥವಾದರೆ ಅವುಗಳ ಬಗ್ಗೆ ಕಾಳಜಿ, ಅವುಗಳ ಪ್ರಾಮುಖ್ಯತೆ ಸಹ ನಮಗೆ ಅರ್ಥವಾಗುತ್ತದೆ. ಅವು ಉಳಿದು ನಾವೂ ಉಳಿಯುತ್ತೇವೆ.



ಸ್ಕೌಟ್ ಗೈಡ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ-ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು, ಹಾಗೂ ನಾವು ಯೋಗ್ಯ ನಾಗರಿಕರಾಗಲು ತರಬೇತಿ ನೀಡುತ್ತದೆ.

- ಎಸ್. ನಿಜಲಿಂಗಪ್ಪ

# ಮುಗ್ಧ ಮನಸ್ಸುಗಳ ತಲ್ಲಣ

ಡಾ. ವೆಂಕಟೇಶ್

ಮಕ್ಕಳು ಸ್ವಾಭಾವಿಕವಾಗಿ ಬಹಳ ಸೂಕ್ಷ್ಮವಾಗಿರುತ್ತಾರೆ. ತಂದೆ ತಾಯಂದಿರು ಮಕ್ಕಳಿಗೆ 'ಅದು ಮಗು ಅದಕ್ಕೇನು ಅರ್ಥವಾಗುತ್ತದೆ' ಅಂತ ತಿಳಿದುಕೊಳ್ಳಬಾರದು. ಮಕ್ಕಳ ಮನಸ್ಸು ಬಹಳ ಆಳ ಹಾಗೂ ಸೂಕ್ಷ್ಮವಾದದ್ದು ಮತ್ತು ಕ್ಲಿಷ್ಟಕರವಾದದ್ದು. ಮನೆಯಲ್ಲಿ ಮತ್ತು ಶಾಲೆಯಲ್ಲಿ ಮಕ್ಕಳು ತಮ್ಮ ಸುತ್ತ-ಮುತ್ತಲಿನ ಆಗು ಹೋಗುಗಳನ್ನು ತೀವ್ರವಾಗಿ ಗಮನಿಸುತ್ತಿರುತ್ತಾರೆ.

ಸಹೋದರ ಮತ್ಸರ **(Sibling Rivalary)** : ನನ್ನ ಒಬ್ಬ ರೋಗಿ ಮಾಸ್ಟರ್ ಸುದೀಪ್. ವಯಸ್ಸು 10 ವರ್ಷ. ಬಹಳ ಬುದ್ಧಿವಂತ. ಶಾಲೆಯಲ್ಲಿ ಚೆನ್ನಾಗಿ ಓದಿಕೊಂಡಿದ್ದ. ಆಟ-ಪಾಠಗಳಲ್ಲಿ ಹಾಗೂ ಶಾಲೆಯ ಸಮಾರಂಭಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದ.

ಇದ್ದಕ್ಕಿದ್ದ ಹಾಗೆ ಅವನ ಸ್ವಭಾವದಲ್ಲಿ ಕೆಲವು ಬದಲಾವಣೆಗಳನ್ನು ಅವನ ತಾಯಿ ಹಾಗೂ ಅವನ ಶಾಲಾ ಉಪಾಧ್ಯಾಯರು ಗಮನಿಸತೊಡಗಿದರು.

ಶಾಲೆಯಲ್ಲಿ ಅವನು ಮೊದಲಿನ ಹಾಗೆ ಆಟ, ಪಾಠಗಳಿಗೆ ಹೆಚ್ಚು ಗಮನ ಕೊಡುತ್ತಿರಲಿಲ್ಲ. ಅವುಗಳಲ್ಲಿ ಆಸಕ್ತಿ ಇಲ್ಲದಂತಾಯಿತು. ಒಬ್ಬನೇ ಕುಳಿತುಕೊಂಡು ಯಾವುದೋ ಗಾಢವಾದ ಯೋಚನೆಯಲ್ಲಿರುವಂತೆ ಇರುತ್ತಿದ್ದ. ಮನೆಯಲ್ಲೂ ಸಹ. ಶಾಲೆಯಿಂದ ಬಂದ'ಮೇಲೆ ಸ್ನೇಹಿತರ ಜತೆ ಆಟವಾಡುವುದನ್ನು ನಿಲ್ಲಿಸಿದ. ಮಾತಾಡಿಸಿದರೆ ಸಿಟ್ಟು ಮಾಡಿಕೊಳ್ಳುತ್ತಿದ್ದ. ಊಟದ ಕಡೆ ಗಮನ ಕಡಿಮೆಯಾಯಿತು. ಮುಂಚೆಯಾದರೆ ಸಣ್ಣ ಪುಟ್ಟ ಮನೆ ಕೆಲಸದಲ್ಲಿ ತಾಯಿಗೆ ನೆರವಾಗುತ್ತಿದ್ದ. ಈಗ ಏನಾದರೂ ಕೆಲಸ ಹೇಳಿದರೆ ಕೋಪಮಾಡಿಕೊಳ್ಳುವುದು, ಕೆಟ್ಟ ಭಾಷೆಯಲ್ಲಿ ತಾಯಿಯನ್ನು ಬೈಯ್ಯುಲು ಆರಂಭಿಸುತ್ತಿದ್ದ. ಯಾವಾಗಲೂ ಟಿ.ವಿ.ಯ ಮುಂದೆ ಅಥವಾತನ್ನ ಕೋಣೆಯಲ್ಲಿ ಒಬ್ಬನೇ ಕುಳಿತು ಅಳುತ್ತಿದ್ದ. ರಾತ್ರಿಹೊತ್ತು ಕಣ್ಣು ಬಿಟ್ಟುಕೊಂಡೇ ಇರುತ್ತಿದ್ದ.ಶಾಲೆಯಲ್ಲಿ ಅವನ ಉಪಾಧ್ಯಾಯರು "ನಿಮ್ಮ ಮಗ ಓದುತ್ತಿಲ್ಲ. ಅವನಿಗೆ ಯಾವುದರಲ್ಲೂ ಆಸಕ್ತಿ ಇಲ್ಲ. ಮನೆಗೆ ವಹಿಸಿದ ಕರ್ತವ್ಯ ನಿರ್ವಹಿಸದೆ ಬರುತ್ತಾನೆ, ಹೊಡೆದು-ಬೈದು ಮಾಡಿದರೆ ಏನೂ ಉತ್ತರ ಕೊಡದೆ ತಲೆ ತಗ್ಗಿಸಿಕೊಂಡು ಅಳುತ್ತಾನೆ. ಅವನನ್ನು ಮನೋರೋಗ ತಜ್ಞರಿಗೆ ತೋರಿಸಿದರೆ ಒಳಿತು" ಎಂದು ಹುಡುಗನ ಪೋಷಕರಿಗೆ ಸಲಹೆ ಮಾಡಿದರು.

ಆದರೆ ಅವನ ತಂದೆ ತಾಯಿ ಅವನಿಗೆ ಏನೋ ಸೋಂಕು ಹಿಡಿದಿದೆ. ಯಾರೋ ಮಾಟ ಮಾಡಿಸಿದ್ದಾರೆ; ಅಂದು ಕೊಂಡು ಸುತ್ತಮುತ್ತಲಿನ ಕೆಲವು ದೇವಸ್ಥಾನದ ಪೂಜಾರಿಗಳಿಗೆ ಮತ್ತು ಮಂತ್ರವಾದಿಗಳಿಗೆ ಅವನನ್ನು ತೋರಿಸಿದರು. ಯಾವುದೂ ಪ್ರಯೋಜನವಾಗಲಿಲ್ಲ. ಅಷ್ಟುಹೊತ್ತಿಗಾಗಲೇ ಸುಮಾರು ಮೂರು ತಿಂಗಳು ಕಳೆದಿತ್ತು.

ಕೊನೆಗೆ ಅವರು ತಮ್ಮ ಕುಟುಂಬದ ವೈದ್ಯರಲ್ಲಿ ಕರೆದುಕೊಂಡು ಹೋಗಿ ತೋರಿಸಿದಾಗ; ವೈದ್ಯರು ಅವನನ್ನು ಪರಿಶೀಲಿಸಿ ಈ ವಿದ್ಯಾರ್ಥಿಯನ್ನು ಮನೋರೋಗ ವೈದ್ಯರಲ್ಲಿಗೆ ಕರೆದುಕೊಂಡುಹೋಗಲು ಸೂಚಿಸಿದರು.

ಆತನ ಪೋಷಕರು ಸುದೀಪನನ್ನು ನನ್ನಲ್ಲಿಗೆ ಕರೆತಂದಾಗ ಸುದೀಪ್ ಕೋಣೆಯ ಒಳಗೆ ನಿಧಾನವಾಗಿ ಬಂದ. ನಾನು ಮೊದಲು ಅವನ ತಂದೆ ತಾಯಿಯಲ್ಲಿ ಏನು ತೊಂದರೆ ಅಂತ ವಿಚಾರಿಸಿ ನಂತರ ಅವನನ್ನು ಏಕಾಂತದಲ್ಲಿ ಮಾತನಾಡಲು ಆರಂಭಿಸಿದೆ.

ಮೊದಮೊದಲು ಸುದೀಪ್ ತಲೆ ಎತ್ತಿ ಮಾತನಾಡಲೇ ಇಲ್ಲ. ಅಳುವುದಕ್ಕೆ ಶುರು ಮಾಡಿದ. "ನನಗೆ ತುಂಬಾ ದುಃಖವಾಗುತ್ತದೆ, ಯಾವುದರಲ್ಲೂ ಆಸಕ್ತಿ ಇಲ್ಲ, ಓದಿನ ಕಡೆ ಗಮನ ಕಡಿಮೆಯಾಗಿದೆ, ನಾನು ನನ್ನ ತಂದೆ ತಾಯಿಗೆ ಹೊರೆಯಾಗಿದ್ದೇನೆ, ನಾನು ಸಾಯಬೇಕು, ನನ್ನ ತಮ್ಮನೇ ಬದುಕಲಿ" ಎಂದು ಹೇಳಿ ಅಳತೊಡಗಿದ. ಬಿಡಿಸಿ ಕೇಳಿದಾಗ "ನನಗೆ ಒಬ್ಬ ತಮ್ಮನಿದ್ದಾನೆ, ಅವನು ಹುಟ್ಟಿದ ಮೇಲೆ ನನ್ನ ತಂದೆ ತಾಯಿ ಮತ್ತು ಬಂಧು ಬಳಗದವರ ಪ್ರೀತಿ - ಪ್ರೇಮ ನನ್ನ ಮೇಲೆ

ಕಡಿಮೆಯಾಗಿದೆ. ಎಲ್ಲರ ಗಮನ ಅವನ ಮೇಲೆಯೇ ಇದೆ, ನಾನು ಯಾವುದರಲ್ಲಿ ಕಡಿಮೆ''? ಎಂದು ಮರು ಪ್ರಶ್ನೆಹಾಕಿದ. ಮನೆಯಲ್ಲಿ ಯಾವಾಗಲೂ ಅವನದೇ ಮಾತು, ಅವನನ್ನು ಸಾಯಿಸಿ ತಾನು ಸಾಯಬೇಕು ಅನ್ನಿಸುತ್ತೆ ಅಂದ.

ಇದನ್ನು Sibling rivallary ಅಥವಾ ಸಹೋದರ ಮಾತ್ಸರ್ಯ ಎಂದು ಗುರುತಿಸುತ್ತಾರೆ. ಇದು ಒಂದು ರೀತಿ ಎಳೆಯ ಮಕ್ಕಳಲ್ಲಿ ಉದ್ಭವಿಸುವ ಮಾನಸಿಕ ಸಮಸ್ಯೆ. ಕೆಲವು ಮನೆಗಳಲ್ಲಿ ಮೊದಲನೆಯ ಮಗನಿಗೆ ಅಥವ ಮಗಳಿಗೆ ತುಂಬ ಮುದ್ದು ಮಾಡಿ ಬೆಳೆಸುತ್ತಾರೆ. ಆದರೆ ಎರಡನೆಯ ಮಗು ಹುಟ್ಟಿದಾಗ ಮನೆಯಲ್ಲಿ ಸಹಜವಾಗಿ ಮೊದಲು ಮಗು ಬೆಳೆದಿರುವುದರಿಂದ ಆ ಮಗುವಿನ ಕಡೆಗೆ ಲಕ್ಷ್ಯ ಕಡಿಮೆಯಾಗುತ್ತದೆ. ಆಗ ಕೆಲವೊಮ್ಮೆ ಮಕ್ಕಳಲ್ಲಿ ಎರಡನೆಯ ಮಗುವಿನ ಬಗ್ಗೆ ಕೋಪ ಅಥವಾ ಮತ್ಸರ ಮಾನಸಿಕವಾಗಿ ಆರಂಭವಾಗುತ್ತದೆ. ತಂದೆ ತಾಯಿಯರ ಪ್ರೀತಿಗೆ ತವಕ ಆತನಲ್ಲಿ ಹೆಚ್ಚಾಗುತ್ತದೆ, ಅದು ದೊರಕದಿದ್ದಾಗ ಆತ ಖಿನ್ನತೆಗೆ ಒಳಗಾಗುತ್ತಾನೆ. ತನ್ನ ತಮ್ಮನನ್ನೊ, ತಂಗಿಯನ್ನೊ ಹಂಗಿಸುವುದು, ತಂದೆ ತಾಯಿಯರು ಮಗುವನ್ನು ಮುದ್ದು ಮಾಡಿದಾಗ ಅಸೂಯೆಯಿಂದ ನೋಡುವುದು ಇತ್ಯಾದಿ ಲಕ್ಷಣಗಳು ಕಾಣಿಕೊಳ್ಳುತ್ತವೆ.

ಚಿಕಿತ್ಸೆ : ಈ ಮಾನಸಿಕ ಸಮಸ್ಯೆಗೆ ಅತ್ಯಂತ ಸುಲಭವಾದ ಪರಿಹಾರ ಚಿಕಿತ್ಸೆ ಮನೋತಜ್ಞರಿಂದ ದೊರಕುತ್ತದೆ. ಇದಕ್ಕೇನು ಚುಚ್ಚು ಮದ್ದಿನ ತೀರಾ ಆವಶ್ಯಕತೆ ಇಲ್ಲ. ಆ ಮಗುವಿನ ಮನಸ್ಸನ್ನು ಅರ್ಥಮಾಡಿಕೊಳ್ಳುವ ಮೂಲಕ, ಆತನನ್ನು ಮಾತನಾಡಿಸುತ್ತಾ ಮನಸ್ಸಿನಲ್ಲಿ ಹುದುಗಿರುವುದನ್ನು ಹೊರತೆಗೆಯುವುದರ ಮೂಲಕ ರೋಗಿಯನ್ನು ಪೂರ್ತಿ ಅರ್ಥಮಾಡಿಕೊಂಡು ಅವನಿಗೆ ಮನವರಿಕೆ ಆಗುವಂತೆ ಸಾಮಾನ್ಯ ಭಾಷೆಯಲ್ಲಿ ತಿಳಿಹೇಳುವ ಮೂಲಕ ಹಾಗೂ ಆತನ ಪೋಷಕರಿಗೆ ಅವನ ಬಗ್ಗೆ ನಡೆದುಕೊಳ್ಳಬೇಕಾದ ಬಗ್ಗೆ ಮನವರಿಕೆ ಮಾಡಿಕೊಡುವ ಮೂಲಕ ಪರಿಹರಿಸಬಹುದು. ತೀವ್ರ ಖಿನ್ನತೆ ಇದ್ದರೆ ಅದನ್ನು ವಾಸಿಮಾಡುವ ಮಾತ್ರೆಯನ್ನು ಆರು ತಿಂಗಳ ಮಟ್ಟಿಗೆ ಕೊಡಬೇಕು.

ಸಮೂಹ ಸನ್ನಿ : **( Mass Hysteria)** ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿಗೆ ಅಂಟಿಕೊಂಡಂತೆ ಇರುವ ಹಳ್ಳಿಯಲ್ಲಿ ಒಂದು ಶಾಲೆ. ಆ ಶಾಲೆಗೆ ವಸತಿ ಸೌಕರ್ಯ ಇದೆ. ಸುಮಾರು 50 ಜನ ಹುಡುಗರು ವಸತಿಯಲ್ಲಿದ್ದು ಅಲ್ಲಿಂದಲೇ ಶಾಲೆಗೆ ಹೋಗುತ್ತಾರೆ. ಆ ಶಾಲೆಯ ಅಡಿಗೆಯವನಿಗೂ ವಾರ್ಡನ್‌ಗೂ ಸ್ವಲ್ಪ ಮನಃಸ್ತಾಪವಿತ್ತು. ಅಡಿಗೆ ಕೆಲಸದವಳು ವಾರ್ಡನ್‌ಗೆ ಕೆಟ್ಟ ಹೆಸರು ಬರಲೆಂದು ಮಕ್ಕಳಲ್ಲಿ ಭಯ ಹುಟ್ಟಿಸಲು ಪ್ರಾರಂಭಿಸಿದಳು. ಮೊದಲು 3-4 ಅತೀಸುಲಭವಾಗಿ ಆಕೆಯ ಪ್ರಭಾವಕ್ಕೊಳಗಾಗುವ (Hysterical Personality) ಯುಳ್ಳ ಮಕ್ಕಳನ್ನು ಆರಿಸಿ ತನ್ನ ಮಾತುಕೇಳುವಂತೆ ಮಾಡಿಕೊಂಡಳು. "ನಿಮಗೆ ನಾನು ಮಾಡಿದ ಯಾವುದೇ ಪದಾರ್ಥ ತಿಂದರು ತಕ್ಷಣ ವಾಂತಿಯಾಗುತ್ತದೆ'' ಎಂದು ಸುದ್ದಿ ಮಾಡತೊಡಗಿದಳು. ಈ ಸೂಕ್ಷ್ಮಮನಸ್ಸಿನ ಮಕ್ಕಳು ಊಟವಾದ ತಕ್ಷಣ ಬಲವಂತದ ವಾಕರಿಕೆ ಮಾಡಿಕೊಳ್ಳುವುದಕ್ಕೆ ಪ್ರಾರಂಭಿಸಿದರು. ಇದನ್ನು ನೋಡಿದ ಇತರೆ ಮಕ್ಕಳು ನಮಗೆ ಹುಟ್ಟೆನೋವು - ವಾಂತಿ ಆಗುವಹಾಗೆ ಆಗುತ್ತದೆ ಎಂದು ಊಟವಾದ ತಕ್ಷಣ ಬಲವಂತವಾಗಿ ವಾಂತಿ ಮಾಡುವುದಕ್ಕೆ ಶುರುಮಾಡಿದರು. 2 ದಿನದ ನಂತರ ವಸತಿ ಗೃಹದ ಶೇ. 75 ಭಾಗ ವಿದ್ಯಾರ್ಥಿಗಳು ಹೊಟ್ಟೆನೋವಿನಿಂದ ಬಳಲಿ ವಾಂತಿ ಮಾಡತೊಡಗಿದರು. ಸುಮಾರು 15 ಜನ ವಿದ್ಯಾರ್ಥಿಗಳು ಸೀರಿಯಸ್ ಆಗಿ ಆಸ್ಪತ್ರೆ ಸೇರುವ ಸ್ಥಿತಿ ತಲುಪಿದರು.

ಆಸ್ಪತ್ರೆಯಲ್ಲಿ ನೋಡಿದವರು ಎಲ್ಲಾರೀತಿಯ ತಪಾಸಣೆಮಾಡಿ ಈ ಮಕ್ಕಳಿಗೆ ಶಾರೀರಕವಾಗಿ ಏನೂ ತೊಂದರೆ ಇಲ್ಲ. ಇದು ಮಾಸ್ ಹಿಸ್ಟೀರಿಯಾ ಎಂದು ನನ್ನಲ್ಲಿಗೆ ಕಳುಹಿಸಿದರು.

ನಾನು ಮೂರು ಜನ ವಿದ್ಯಾರ್ಥಿಗಳನ್ನು ಏಕಾಂತದಲ್ಲಿ ಮಾತನಾಡಿಸಿದಾಗ ವಿದ್ಯಾರ್ಥಿಗಳು ನಿಜವಾದ ಅಂಶವನ್ನು ಹೊರಹಾಕಿದರು. ತಕ್ಷಣ ಅಡಿಗೆಯವರನ್ನು ವಿಚಾರಿಸಿದಾಗ ನಿಜ ಪರಿಸ್ಥಿತಿ ಬಯಲಾಯಿತು. ಕೊನೆಗೆ ಶಿಕ್ಷಣ ಇಲಾಖೆಯವರು ಅಡಿಗೆಯವರ ಮೇಲೆ ಕ್ರಮ ಕೈಗೊಂಡು ವಿದ್ಯಾರ್ಥಿಗಳಿಗೆ ತಿಳಿ ಹೇಳಿದಾಗ ಮಕ್ಕಳಲ್ಲಿ ವಾಂತಿ, ಹೊಟ್ಟೆನೋವು ತಕ್ಷಣ ನಿಂತು ಹೋಯಿತು.

ಮಾಸ್ ಹಿಸ್ಟೀರಿಯಾ ಅಥವಾ ಸಮೂಹ ಸನ್ನಿ ಒಂದು ಬಗೆಯ ಮನೋರೋಗ. ಉತ್ತರ ಕರ್ನಾಟಕದಲ್ಲಿ ಕೆಲವು ಮನೆಗಳಲ್ಲಿ ಇದ್ದಕ್ಕಿದ್ದ ಹಾಗೆ ಬೆಂಕಿ ಹೊತ್ತಿಕೊಳ್ಳುತ್ತಿತ್ತು. ಇದರಲ್ಲಿ ಕೆಲವು ಗುಡಿಸಲುಗಳಲ್ಲಿ ಮಾತ್ರ ಬೆಂಕಿ ಕಾಣಿಸಿಕೊಳ್ಳುತ್ತಿತ್ತು. ಯಾರು ಹಚ್ಚುತ್ತಾರೆ? ಯಾಕೆ ಹಚ್ಚುತ್ತಾರೆ ? ಗೊತ್ತಾಗುತ್ತಿರಲಿಲ್ಲ. ಹತ್ತಿರದ ಊರಿನಿಂದ ಕೆಲವು ವೈದ್ಯರು ಇದನ್ನು ನೋಡಲೆಂದು ಹೋದಾಗ ಆ ದಿನ ರಾತ್ರಿ ಎಲ್ಲೂ ಬೆಂಕಿ ಕಾಣಿಸಿಕೊಳ್ಳಲಿಲ್ಲ.

ಹಳ್ಳಿಯ ಜನ ಇದು ಕೊಳ್ಳಿದೆವ್ವದ ಚೇಷ್ಟೆ, ಯಾರು ಜೀವನದಲ್ಲಿ ಮೋಸ, ವಂಚನೆ ಮಾಡಿರುತ್ತಾರೋ ಅವರ ಮನೆ ಹೊತ್ತಿ ಉರಿಯುತ್ತದೆ ಎಂಬ ವದಂತಿ ಹರಡಿದರು. ಕೊನೆಗೆ ತನಿಖೆ ಮಾಡಿದಾಗ ಒಬ್ಬ ಹುಡುಗ ಸಿಕ್ಕಿಹಾಕಿಕೊಂಡ. ಅವನ್ನು ಮಾನಸಿಕ ರೋಗಿಯಾಗಿದ್ದು ಇದಕ್ಕೆ ಬಲವಂತವಾಗಿ ಬೆಂಕಿ ಹಚ್ಚುವ ಮನಃಸ್ಥಿತಿ (ಫೈರೋಮ್ಯಾನೀಯ) ಎಂದು ಮನೋರೋಗ ತಜ್ಞರು ಅಭಿಪ್ರಾಯ ವ್ಯಕ್ತಪಡಿಸಿದರು. ಈ ಹುಡುಗ ಬೆಂಕಿ ಹಚ್ಚುವುದನ್ನು ಯಾರೂ ನೋಡಿರಲಿಲ್ಲ. ಅವನು ರಾತ್ರಿ ಹಳ್ಳಿಯ ಜನ ಮಲಗಿದ ಮೇಲೆ ಪಂಜಿನಿಂದ ಬೆಂಕಿ ಹಚ್ಚುತ್ತಿದ್ದ. ಪರಿಸ್ಥಿತಿಯ ಲಾಭ ಪಡೆದ ಹಳ್ಳಿಯ ಜನ ತಮಗೆ ದ್ವೇಷವಿದ್ದವರ ಮನೆಗಳಿಗೆ ಕೊಳ್ಳಿ ಇಡಲು ಶುರುಮಾಡಿದರು. ಇದು ಕೊನೆಗೆ ಒಂದು ಸಾಮಾಜಿಕ ಪಿಡುಗಾಗಿ ಬಿಟ್ಟಿತು. ಸಮೂಹ ಸನ್ನಿ ವ್ಯಕ್ತಿಗತವಾಗಿ ಪರಿಹಾರ ಕಂಡರೂ ಬೇರೆ ಬೇರೆ ಕಾರಣಗಳಿಂದ ಸಾಮಾಜಿಕವಾಗಿ ಒಂದು ಅಸ್ತ್ರವಾಗಿಬಿಡುವ

